# ಬಿಹಾರದ ಆರುಮಂದಿ ದಲಿತರಿಗೆ ಗಲ್ಲು

ತಮ್ಮ ವಿರೋಧಿ ದಾಳಿಯ ವಿರುದ್ಧ ಸಶಸ್ತ್ರ ಹೋರಾಟ ನಡೆಸಿದ ಬಿಹಾರದ ಆರುಮಂದಿ ಭೂರಹಿತ ಹರಿಜನರಿಗೆ ಗಲ್ಲು ಶಿಕ್ಷೆ ಆಜ್ಞೆಮಾಡಲಾಗಿದೆ. ಗಲ್ಲು ಶಿಕ್ಷೆಗೆ ಗುರಿಯಾಗಿರುವ ಆ ಬಡ ರೈತರೆಂದರೆ ಗುಣಸಾಗರ್ ಮಂಡಲ್, ಸಹದೇವ್ ಮಂಡಲ್, ರಾಜೇಂದ್ರ ಮಂಡಲ್, ಮಹೇಂದ್ರ ಮಂಡಲ್, ಲಾಲ್ ಬಿನ್ನಿ ಮಂಡಲ್ ಮತ್ತು ಗಣೇಶ್ ಮಂಡಲ್. ಈಗ ಇವರನ್ನು ಭಾಗಲ್ಪುರ ಸೆಂಟ್ರಲ್ ಜೈಲಿನಲ್ಲಿಡಲಾಗಿದೆ.

ಈ ಆರುಮಂದಿ ಹರಿಜನರಿಗೆ ಸುಪ್ರೀಂ ಕೋರ್ಟ್ ಇತ್ತೀಚೆಗೆ ವಿಧಿಸಿದ ಮರಣದಂಡನೆ ವಿರೋಧಿಸಿ ಲಂಡನ್‌ನಲ್ಲಿರುವ ಭಾರತೀಯ ದಲಿತರು, ಬೌದ್ಧ ಸಂಘಗಳು. ಭಾರತೀಯ ಕಾರ್ಮಿಕರ ಸಂಘಗಳು ಮತ್ತು ಬರ್ಮಿಂಗ್ ಹ್ಯಾಂನ ಭಾರತಿ ದಲಿತ ಮುಕ್ತಿ ಒಕ್ಕೂಟವು ಅಲ್ಲಿನ ಭಾರತೀಯ ರಾಯಭಾರಿ ಕಚೇರಿ ಎದುರು ಮಾರ್ಚ್ 23ರಂದು ಧರಣಿ ನಡೆಸಿದರೆಂದು ಲಂಡನ್‌ನ 'ಮಿಲಿಟೆಂಟ್' ಮತ್ತು ನ್ಯೂಯಾರ್ಕ್‌ನ 'ಇಂಡಿಯಾ ನೌವ್' ಎಂಬ ಪತ್ರಿಕೆಗಳು ಇತ್ತೀಚೆಗೆ ವರದಿಮಾಡಿವೆ.

ಈ ಆರು ಮಂದಿಗೆ ಜೀವಧಾನ ಮಾಡಬೇಕೆಂದು ಅಂತರ ರಾಷ್ಟ್ರೀಯ ಕ್ಷಮಾಧಾನ ಸಂಸ್ಥೆ ಈಗಾಗಲೇ ಕೋರಿದ್ದು, ಗಲ್ಲು ಶಿಕ್ಷೆಯನ್ನು ಖಂಡಿಸಿದೆ. ಕಲ್ಕತ್ತಾದಲ್ಲಿನ ಪ್ರಜಾಸತ್ತಾತ್ಮಕ ಹಕ್ಕು ಸಂರಕ್ಷಣ ಸಮಿತಿ ರಾಷ್ಟ್ರಪತಿಗೆ ಮನವಿಯೊಂದನ್ನು ಮಾಡಿಕೊಂಡಿದ್ದು, "ಈ ಆರು ಮಂದಿ ಬಡರೈತರಿಗೆ ಗಲ್ಲು ಶಿಕ್ಷೆ ವಿಧಿಸಲಾಗಿದೆಯೇ ವಿನಹ ಬೆಲ್ಚಿ, ಬಿಸ್‌ರಾಮ್‌ಪುರ, ಬೆಗುಸರಾಯ್, ಬಜಿತ್‌ಪುರ ಮುಂತಾದ ಸ್ಥಳಗಳಲ್ಲಿ ಹರಿಜನರ ಮತ್ತು ಮಹಿಳೆಯರ ಮೇಲಿನ ಅಮಾನುಷ ಹತ್ಯಾಕಾಂಡ, ಅತ್ಯಾಚಾರ ನಡೆಸಿದ ಕುಖ್ಯಾತ ಭೂಮಾಲೀಕರಲ್ಲಿ ಒಬ್ಬರನ್ನಾದರೂ ಶಿಕ್ಷಿಸಿಲ್ಲ" ವೆಂದು ತನ್ನ ಪ್ರತಿಭಟನೆ ಸೂಚಿಸಿದೆ.

ಇಂತಹ ಅಮಾನವೀಯ ಗಲ್ಲು ಶಿಕ್ಷೆ ದಲಿತರ ಮೇಲೆ ಇದೇ ಮೊದಲಸಲದ್ದಲ್ಲ. ಇಂದಿರಾ ಗಾಂಧಿಯ ತುರ್ತುಪರಿಸ್ಥಿತಿ ಕಾಲದಲ್ಲೂ 1975ರ ಡಿಸೆಂಬರ್ 1ರಂದು ಆಂಧ್ರದ ದಲಿತರ ನೆಚ್ಚಿನ ಮು ಖ ಂ ಡ ರು ಗ ಳಾ ದ ಜನಗಂಭೂಮಯ್ಯ ಮತ್ತು ಕಿಷ್ಟಗೌಡ ಎಂಬುವರನ್ನು ಗಲ್ಲಿಗೇರಿಸಿದ್ದನ್ನು ಮರೆಯಲಾಗದು. ಈ ಹೇಯ ಕೃತ್ಯಗಳು ಮತ್ತೆ ಮರುಕಳಿಸದಂತೆ ಈ ಆರು ಮಂದಿ ಹರಿಜನರ ರಕ್ಷಣೆಗಾಗಿ ಎಲ್ಲಾ ದಲಿತರು ಹೋರಾಡಬೇಕಾಗಿದೆ.

# ಪಂಚಮ

ಸಂಪುಟ : 3 ಸಂಚಿಕೆ : 9–10 5 ಜೂನ್ 1979 ಪಾಕ್ಷಿಕ ಬೆಲೆ : 20 ಪೈಸೆ



## ಚಿಂತಾಮಣಿ ದಲಿತರ ಮೇಲೆ ಹಲ್ಲೆ

[ಪಂಚಮ ಪ್ರತಿನಿಧಿಯಿಂದ]

ಚಿಂತಾಮಣಿ ಟೌನ್ ವಿನೋಬಾ ಕಾಲೋನಿಯ ಹರಿಜನರ ಮೇಲೆ ಇತ್ತೀಚೆಗೆ ನಡೆದ ಪುರಸಭಾ ಚುನಾವಣೆಯಲ್ಲಿ ಆಯ್ಕೆಯಾದ ಇದೇ ಟೌನ್‌ಗೆ ಸೇರಿದ ಸೊಣ್ಣಸೆಟ್ಟಹಳ್ಳಿಯ ಅಬ್ದುಲ್ ಜಬ್ಬಾರ್ ಸಾಬಿ, ಆಂಜನಪ್ಪ. ಕೃಷ್ಣಪ್ಪ; ವೆಂಕಟರಮಣಪ್ಪ ಎಂಬ ಸದಸ್ಯರು ತಮ್ಮ ಗೂಂಡಾ ಶಕ್ತಿಗಳೊಡನೆ ಮೇ 29 ಮತ್ತು 30ರಂದು ಸತತವಾಗಿ ಅಮಾನುಷವಾದ ದೌರ್ಜನ್ಯ ಎಸಗಿದ್ದಾರೆ.

ಈ ದೌರ್ಜನ್ಯಕೋರರು ತಮ್ಮ ಬೆಂಬಲಿಗರಾದ ಗಫಾರ್‌ಸಾಬಿ, ಜಬ್ಬಾರ್‌ಸಾಬಿಯ ಅಳಿಯ ಖಲೀಲ್ ಮತ್ತು ಆತನ ಸಾ ಮಿಲ್ಲಿನ ನೌಕರರಾದ ರಾಜು, ಜಯರಾಂ, ನಾರಾಯಣಪ್ಪ ಮತ್ತು ವೆಂಕಟೇಶ್ ಹಾಗೂ ಗಾರೆ ಮೇಸ್ತ್ರಿ ವೆಂಕಟೇಶ ಎಂಬುವವರು ರೇಜರ್, ಸೈಕಲ್ ಚೈನು ರಿಪೀಸ್‌ಗಳು, ದೊಣ್ಣೆ ಮುಂತಾದ ಅಪಾಯಕಾರಿ ಆಯುಧಗಳಿಂದ ಕೈಗೆ ಸಿಕ್ಕಿದ ಹರಿಜನರನ್ನೆಲ್ಲ ಸಿಕ್ಕಾಪಟ್ಟೆ ಥಳಿಸಿದ್ದಾರೆ.

ಎರಡನೇ ಡಿವಿಜನ್ ಮೀಸಲು ಸ್ಥಾನಕ್ಕೆ ಪಕ್ಷೇತರ ಅಭ್ಯರ್ಥಿ ವೆಂಕಟರಮಣಪ್ಪ ಎಂಬುವವರನ್ನು ಆಯ್ಕೆ ಮಾಡಿದುದೇ ಹರಿಜನರ ಮೇಲಿನ ದೌರ್ಜನ್ಯಕ್ಕೆ ಕಾರಣವಾಗಿದೆ.

(ಕೊನೆ ಪುಟ ನೋಡಿ)

## ಮಾಲೂರಿನಲ್ಲಿ ಕಗ್ಗೊಲೆ

(ನಮ್ಮ ವಿಶೇಷ ಪ್ರತಿನಿಧಿಯಿಂದ)

ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕು ಹುರಳಗೆರೆಯಲ್ಲಿ ಎಲ್ಲಪ್ಪ ಎಂಬ ದಲಿತನನ್ನು ಸವರ್ಣೀಯ ಭೂಮಾಲೀಕರು ಮೇ 17ರಂದು ಕೊಲೆ ಮಾಡಿ ಶವವನ್ನು ಅಪಹರಿಸಿದ್ದಾರೆಂದು ಮೃತನ ಪತ್ನಿ ಮುನಿತಾಯಮ್ಮ ಅವರು ತಿಳಿಸಿದ್ದಾರೆ.

ನನ್ನ ಪತಿ ಎಲ್ಲಪ್ಪ ನನ್ನನ್ನು ಮತ್ತು ಮಕ್ಕಳನ್ನು ನೋಡಲು ಹುರಳಗೆರೆಗೆ ಬಂದಾಗ ಕೋಡಿಹಳ್ಳಿ ಹಾಗೂ ಚೊಪ್ಪನಹಳ್ಳಿಯ ಸವರ್ಣೀಯ ಜಮೀನ್ದಾರರು ಆತನ ಮೇಲೆ ಹಲ್ಲೆ ನಡೆಸಿ ನನ್ನ ಎದುರೇ ಅಮಾನುಷವಾಗಿ ಕೊಲೆಮಾಡಿ ಹೆಣವನ್ನು ಹೊತ್ತುಕೊಂಡು ಹೋದರೆಂದು ಆಕೆ ಪೊಲೀಸ್ ಅಧಿಕಾರಿಗಳಿಗೆ ಸಲ್ಲಿಸಿರುವ ಮನವಿಯಲ್ಲಿ ತಿಳಿಸಲಾಗಿದೆ.

(ಕೊನೆ ಪುಟ ನೋಡಿ)

# ಮಹಾರಾಷ್ಟ್ರ ದಲಿತ ಬರಹಗಾರರ ಸಮಾವೇಶ

ಸಾಮಾಜಿಕ ಅಸಮಾನತೆ ವಿರುದ್ಧ ಬಂಡೇಳಲು ದಲಿತ ಸಾಹಿತ್ಯ ಒಂದು ಪ್ರಕ್ರಿಯೆ, ದಲಿತ ಬರಹಗಾರ ಅದರ ದಾರಿದೀಪ ಎಂದು ಪ್ರಖ್ಯಾತ ದಲಿತ ಬರಹಗಾರ ಜನಾರ್ಧನ್ ವಾಘ್ಮಾರೆ ಅವರು ಮೇ 26ರಂದು ಕೊಲ್ಲಾಪುರದಲ್ಲಿ ಸೇರಿದ್ದ ಮಹಾರಾಷ್ಟ್ರದ ದಲಿತ ಬರಹಗಾರರ 5ನೇ ಸಮಾವೇಶದ ಅಧ್ಯಕ್ಷತೆ ವಹಿಸಿ ಮಾತನಾಡುತ್ತ ಹೇಳಿದರು.

ಸಮಾವೇಶವನ್ನು ಉದ್ಘಾಟಿಸಿದ ದಲಿತ ಮುಖಂಡ ಮಾಧವರಾವ್ ಅವರು ಮಾರ್ಕ್ಸ್‌ವಾದದ ಮೂಲಕ ಸಾಂಸ್ಕೃತಿಕ ಕ್ರಾಂತಿ ನಡೆಸಬೇಕೆಂದು ಕರೆನೀಡಿದರು.

## ಹೋಟೆಲು ಪ್ರವೇಶಿಸಿದ ದಲಿತ ಯುವಕರಿಗೆ ಚಪ್ಪಲಿ ಏಟು

ಯಾದಗಿರಿ ತಾಲ್ಲೂಕಿನ ಮಲ್ಲಾಪುರದಲ್ಲಿ ಹರಿಜನ ಯುವಕರಿಬ್ಬರು ಇತ್ತೀಚೆಗೆ ಹೋಟೆಲಿನ ಒಳಗೆ ಕುಳಿತು ಕಾಫಿಕುಡಿದ "ಅಪರಾಧ"ಕ್ಕೆ ಕ್ರೂರ ಸವರ್ಣೀಯರು ಚಪ್ಪಲಿಗಳಿಂದ ಹೊಡೆದರೆಂದು ವರದಿಯಾಗಿದೆ.

ಈ ಯುವಕರು ಹೋಟೆಲ್ ಒಳಗೆ ಹೋಗಿ ಕಾಫಿ ತಿಂಡಿ ತೆಗೆದುಕೊಳ್ಳುವಾಗ ಸವರ್ಣೀಯರ ಉದ್ರಿಕ್ತ ಗುಂಪೊಂದು ಅವರ ಮೇಲೆ ಹಲ್ಲೆ ನಡೆಸಿತು.

## ಬೆತ್ತಲೆ ಮೆರವಣಿಗೆ : ದ.ಸಂ.ಸ.ಯಿಂದ ತಡೆ

[ಪಂಚಮ ಪ್ರತಿನಿಧಿಯಿಂದ]

ಕಲ್ಬುರ್ಗಿ ಜಿಲ್ಲೆಯ ಚಿಂಚನಸೂರಿನಲ್ಲಿ ಮಹಾಪೂರ ತಾಯಿದೇವಿ ಮತ್ತು ಮಾನ್ವಿತಾಲ್ಲೂಕಿನ ಆರೋಲಿ ಗ್ರಾಮದಲ್ಲಿ ಹುಲಿಗೆಮ್ಮ ದೇವತೆಗಳ ಹೆಸರಿನಲ್ಲಿ ಬಹಳ ವರ್ಷಗಳಿಂದ ಸಾಂಪ್ರದಾಯಿಕವಾಗಿ ಏಪ್ರಿಲ್, ಮೇ ತಿಂಗಳುಗಳಲ್ಲಿ ನಡೆಯುತ್ತಿದ್ದ ದಲಿತ ಮಹಿಳೆಯರ ಬೆತ್ತಲೆ ಮೆರವಣಿಗೆಯನ್ನು ರಾಜ್ಯ ದಲಿತ ಸಂಘರ್ಷ ಸಮಿತಿಯ ರಾಯಚೂರು ಶಾಖೆಯು ಅಲ್ಲಿನ ಅಧಿಕಾರಿಗಳ ಸಹಾಯದಿಂದ ಈ ವರ್ಷದಿಂದ ತಡೆಯಿತು.

ಅಮಾನವೀಯ ಹಾಗೂ ಕ್ರೂರವಾದ ಇಂತಹ ಪದ್ಧತಿಗಳು ಉತ್ತರ ಕರ್ನಾಟಕದ ಅನೇಕ ಕಡೆಗಳಲ್ಲಿ ಇನ್ನೂ ನಡೆಯುತ್ತಿದ್ದು, ಅವುಗಳನ್ನು ತಡೆಗಟ್ಟಲು ಎಲ್ಲಾ ಪ್ರಗತಿಪರ ಶಕ್ತಿಗಳು ಒಗ್ಗೂಡಿ ಹೋರಾಡಬೇಕಾಗಿದೆ.

## ಹತ್ತೂ ಸುತ್ತಿನಿಂದ

ನಾನು ಪ್ರಧಾನಿಯಾಗಲು ಇನ್ನು ಸಾವಿರ ವರ್ಷವಾದರೂ ಬೇಕು. ಏಕೆಂದರೆ ಹಿಂದೂ ಸಮಾಜ ನನ್ನನ್ನು ಅಂಗೀಕರಿಸಿಲ್ಲ.

—ಜಗಜೀವನರಾಂ.

ಕಮ್ಯೂನಿಸಂ ಭಾರತಕ್ಕೇನೂ ಹೊಸದಲ್ಲ. ಅಂಥ ಸಂದರ್ಭ ಬಂದರೆ ನಾನೇ ನಾಯಕತ್ವವಹಿಸಬಹುದು.

—ದೇವರಾಜ ಅರಸು.

(ಮೇ 25ರಂದು ವಿಧಾನ ಪರಿಷತ್ತಿನಲ್ಲಿ)

ಮಲ್ಲೇಶ್ವರಂ, ಬಸವನಗುಡಿ ಜನ ಅಂಬೇಡ್ಕರ್ ಫೋಟೋ ಹಾಕಿಕೊಳ್ಳದಿರುವಾಗ ಅವರ ನಾಯಕರ ಫೋಟೋಗಳನ್ನು ನೀವೇಕೆ (ದಲಿತರು) ಹಾಕಿಕೊಳ್ಳಿತ್ತೀರಿ ?

—ಬಿ. ಬಸವಲಿಂಗಪ್ಪ

ಹರಿಜನ–ಗಿರಿಜನ ಮತ್ತು ಹಿಂದುಳಿದ ವರ್ಗದವರ ಪ್ರಾತಿನಿಧ್ಯಕ್ಕಾಗಿ ಸಾಯಲು ಸಿದ್ಧ.

—ಎಲ್. ಜಿ. ಹಾವನೂರು

ಹಾಸನ ಜಿಲ್ಲೆ ಶಾಸಕ ಹನುಮೇಗೌಡರು ಆಸ್ತಿ ಮಾಡಿರುವುದೆಲ್ಲಾ ಹರಿಜನರದ್ದೇ.

—ಎ. ಕೆ. ಸುಬ್ಬಯ್ಯ

(16-5-79ರಂದು ವಿಧಾನ ಪರಿಷತ್ತಿನಲ್ಲಿ)

ಮೀಸಲು ಸೌಲಭ್ಯವನ್ನು ನಿರಾಕರಿಸುವವರಿಗೆ ಒರಿಸ್ಸಾ ಮತ್ತು ಪಶ್ಚಿಮ ಬಂಗಾಳದಲ್ಲಿ ಜಾರಿ ಇರುವ ಕಠಿಣಶಿಕ್ಷೆ ಇಲ್ಲಿಯೂ ಆಗಬೇಕು.

—ವೈ. ರಾಮಕೃಷ್ಣ

## ದಲಿತ ನುಡಿ

ಐದು ವರ್ಷಗಳಿಗೊಮ್ಮೆ ಹೋಗಿ ಓಟುದಾಕುವ ಹಕ್ಕಿನಲ್ಲಿ ನನಗೆ ನಂಬಿಕೆ ಇಲ್ಲ. ನಾವು ಒಂದು ಮಹೋನ್ನತವಾದ ಹೋರಾಟ ನಡೆಸಬೇಕಾಗಿದೆ. ಅದಕ್ಕಾಗಿ ನಮ್ಮ ಶಕ್ತಿಯನ್ನೆಲ್ಲಾ ಧಾರೆ ಎರೆಯಬೇಕು.

—ಅಂಬೇಡ್ಕರ್

## ದಲಿತನ ಮೇಲೆ ವರ್ತಕನ ಹಲ್ಲೆ

[ಪಂಚಮ ಪ್ರತಿನಿಧಿಯಿಂದ]

ಚಿಕ್ಕಮಗಳೂರು ತಾಲ್ಲೂಕು ಹಿರೇಕೊಳಲೆ ಗ್ರಾಮದ ಸಣ್ಣ ಅಂಗಡಿ ವರ್ತಕ ಸವರ್ಣೀಯ ಮಲ್ಲೇಶ ಎಂಬಾತನು ಕೇವಲ 50ಪೈಸೆ ಸಾಲ ಕೊಡಬೇಕಾಗಿದ್ದ ದಲಿತ ರುದ್ರಯ್ಯ (30) ಎಂಬಾತನ ಮೇಲೆ ಮೇ25ರಂದು ಹಲ್ಲೆ ನಡೆಸಿದನೆಂದು ವರದಿಯಾಗಿದೆ.

ತನಗೆ ಕೊಡಬೇಕಾಗಿದ್ದ ಸಾಲದ ವಿಚಾರದಲ್ಲಿ ಮಲ್ಲೇಶನು ರುದ್ರಯ್ಯನ ಬಟ್ಟೆಯನ್ನು ಕಸಿದುಕೊಂಡನೆಂದು, ತಕ್ಷಣ ರುದ್ರಯ್ಯ ಸಾಲವನ್ನು ಮರುಪಾವತಿ ಮಾಡಿ, ಸಿಟ್ಟಿನಿಂದ ಬಟ್ಟೆ ಕೇಳಿದ್ದಕ್ಕಾಗಿ ಆತ ಹಲ್ಲೆ ನಡೆಸಿದ. ಈ ಹಲ್ಲೆಯಲ್ಲಿ ರುದ್ರಯ್ಯ ಗಾಯಗೊಂಡು ಆಸ್ಪತ್ರೆ ಸೇರಿದ್ದಾನೆ. ಈ ಸಂಬಂಧದಲ್ಲಿ ದಲಿತ ಸಂಘರ್ಷ ಸಮಿತಿ ಚಿಕ್ಕಮಗಳೂರು ಶಾಖೆ ಪೋಲೀಸರಿಗೆ ದೂರುನೀಡಿದ್ದರಿಂದ ಹಲ್ಲೆಕೋರ ಮಲ್ಲೇಶನ ಮೇಲೆ ಮೊಕದ್ದಮೆ ದಾಖಲು ಮಾಡಲಾಗಿದೆ.

o o o

"ಅಂಬೇಡ್ಕರ್ ಅವರ ವಾದ ಪುನರುಜ್ಜೀವಗೊಂಡು ಉಳಿಯುವುದೇ" ಎಂಬ ವಿಚಾರಗೋಷ್ಠಿಯನ್ನು ಅಖಿಲಭಾರತ ಹರಿಜನ–ಗಿರಿಜನ ಮತ್ತು ಅಲ್ಪಸಂಖ್ಯಾತರ ನೌಕರರ ಒಕ್ಕೂಟದ ರಾಜ್ಯ ಶಾಖೆ ಮೇ 21ರಂದು ಬೆಂಗಳೂರಿನಲ್ಲಿ ಏರ್ಪಡಿಸಿತ್ತು.

o o o

ಬೆಂಗಳೂರಿನ ಒಂದು ಸ್ಟೇಡಿಯಂ ನಿರ್ಮಾಣಕ್ಕೆ ಎರಡು ಕೋಟಿ ರೂ. ಕೊಟ್ಟರೆ ಲಕ್ಷಗಟ್ಟಲೆ ಇರುವ ಹರಿಜನ-ಗಿರಿಜನರ ಕೇರಿಗಳಲ್ಲಿ ಸಮುದಾಯ ಕೇಂದ್ರಗಳ ನಿರ್ಮಾಣಕ್ಕೆ ಈ ವರ್ಷ ಎರಡು ಲಕ್ಷ ರೂ ಒದಗಿಸಿರುವುದು ಎಂಥ ಅದ್ಭುತ ?

—ಮಲ್ಲಿಕಾರ್ಜುನಖರ್ಗೆ.

# ಕೋಲಾರ ಜಿಲ್ಲೆ ತಿಮ್ಮಸಂದ್ರ ಗ್ರಾಮದಲ್ಲಿ ದಲಿತ ಜೀತಗಾರನ ಅಮಾನುಷ ಕಗ್ಗೊಲೆ

[ಪಂಚಮ ಪ್ರತಿನಿಧಿಯಿಂದ]

ಕೋಲಾರ ಜಿಲ್ಲೆ ಚಿಂತಾಮಣಿ ತಾಲ್ಲೂಕು ತಿಮ್ಮಸಂದ್ರ ಗ್ರಾಮದಲ್ಲಿ ರಾಜಣ್ಣ (30) ಎಂಬ ದಲಿತ ಜೀತಗಾರನನ್ನು ಅದೇ ಗ್ರಾಮದ ಭೂಮಾಲೀಕರು ಕೊಲೆ ಮಾಡಿರುವುದಾಗಿ ವರದಿಯಾಗಿದೆ.

ದಲಿತ ರಾಜಣ್ಣ ತಿಮ್ಮಸಂದ್ರದ ಭೂಮಾಲೀಕ ವೆಂಕಟರೆಡ್ಡಿಯ ಮನೆಯಲ್ಲಿ ಕಳೆದ 4–5 ವರ್ಷಗಳಿಂದ ಜೀತಮಾಡಿಕೊಂಡಿದ್ದನು. 1979ರ ಮೇ 1ರಂದು ಯಾವುದೋ ಮಾತಿಗಾಗಿ ದೊಡ್ಡ ನಾರಾಯಣರೆಡ್ಡಿ ಉರುಫ್ ಮುನೆಯ್ಯ, ಚಿಕ್ಕ ನಾರಾಯಣರೆಡ್ಡಿ ಉರುಫ್ ಚಿಕ್ಕಪ್ಪಯ್ಯ ಮತ್ತು ತಮ್ಮರೆಡ್ಡಿ ಅವರು ರಾಜಣ್ಣನ ಮೇಲೆ ಹಲ್ಲೆ ಮಾಡಿ ಅದೇ ರಾತ್ರಿ ಕೊಲೆ ಮಾಡಿದ್ದಾರೆ. ಮೇ 2 ರಂದು ಮೃತ ದೇಹವನ್ನು ಆಪಾದಿತರು ಮಣ್ಣಿನಲ್ಲಿ ಹೂತು ಬಿಟ್ಟರು. ಕೊಲೆ ಮಾಡುವುದನ್ನು ಕಣ್ಣಾರೆ. ಕಂಡ ಕೆಲವರು ಈ ಬಗ್ಗೆ ಮೇ 3ರಂದು ಚಿಂತಾಮಣಿ ಪೊಲೀಸ್ ಠಾಣೆಗೆ ದೂರು ನೀಡಿದರು. ನಂತರ ಮೃತದೇಹನನ್ನು ಹೊರ ತೆಗೆದು ವೈದ್ಯಕೀಯ ಪರೀಕ್ಷೆ ನಡೆಸಲಾಯಿತು.

ವೈದ್ಯಕೀಯ ಪರೀಕ್ಷೆಯ ನಂತರ ಮೃತನ ದೇಹದ ಮೇಲೆ ಹಲವಾರು ಗಾಯಗಳಿದ್ದದ್ದೇ ಅಲ್ಲದೆ ವೃಷಣ ಸಂಪೂರ್ಣ ಜಜ್ಜಿ ಹೋಗಿರುವುದು ತಿಳಿದು ಬಂದಿದೆ. ಆದರೂ ಪೊಲೀಸರು ಕೇಸು ದಾಖಲು ಮಾಡಿಕೊಳ್ಳಲಿಲ್ಲ. ಅಲ್ಲದೆ ದೂರು ನೀಡಿದವರನ್ನು ಬೆದರಿಸಲಾಯಿತು.

ಈ ನಡುವೆ ವೈದ್ಯಕೀಯ ಪರೀಕ್ಷೆಯ ನಂತರ ಹೂಳಲಾಗಿದ್ದ ಮೃತದೇಹವನ್ನು ಆಪಾದಿತರು ಕದ್ದು ಸುಟ್ಟು ಹಾಕಿದ್ದಾರೆಂದು ತಿಳಿದು ಬಂದಿದೆ ಇದರ ಬಗ್ಗೆ ಹಿರಿಯ ಪೊಲೀಸ್ ಅಧಿಕಾರಿಗಳಿಗೆ ದೂರು ನೀಡಿದ್ದರೂ ಏನೂ ಪ್ರಯೋಜನ ವಾಗಿಲ್ಲ. ಮೇ 12ರಂದು ಪೊಲೀಸ್ ಸೂಪರಿಂಡೆಂಟ್ ಅವರು ಸ್ಥಳಕ್ಕೆ ಭೇಟಿನೀಡಿದ್ದರೂ ಏನೂ ಕ್ರಮ ಕೈಗೊಂಡಿಲ್ಲ.

ಕರ್ನಾಟಕ ದಲಿತ ಸಂಘರ್ಷ ಸಮಿತಿ ಈ ಘಟನೆ ಬಗ್ಗೆ ತನಿಖೆ ನಡೆಸಿ ಆಪಾದಿತರಿಗೆ ಕೂಡಲೇ ಶಿಕ್ಷೆ ನೀಡಬೇಕೆಂದು ಒತ್ತಾಯಿಸಿದೆ.

# ದಲಿತರ ವಸತಿ ನಿರ್ಮೂಲನ ವಿರೋಧಿಸಿ ಕುಣಿಗಲ್‌ನಲ್ಲಿ ದ.ಸಂ.ಸ ಪ್ರತಿಭಟನೆ

[ವರದಿ : ಗೋಪಾಲಕೃಷ್ಣ.]

ಕುಣಿಗಲ್ ತಾಲ್ಲೂಕು ದೊಡ್ಡಮಳಲವಾಡಿ ಗ್ರಾಮದ ದಲಿತರ ಮನೆಗಳನ್ನು ಇತ್ತೀಚೆಗೆ ಕೆಡವಿದ ಸರ್ಕಾರದ ಅಮಾನುಷ ಕೃತ್ಯವನ್ನು ಖಂಡಿಸಲು ಕರ್ನಾಟಕ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಮೇ 16ರಂದು ಸುತ್ತ ಮುತ್ತಲಿನ ಹಲವಾರು ಹಳ್ಳಿಗಳ ದಲಿತರನ್ನು ಒಟ್ಟು ಗೂಡಿಸಿ ಕುಣಿಗಲ್ ಟೌನ್‌ನಲ್ಲಿ ಭಾರಿ ಪ್ರದರ್ಶನ ನಡೆಸಿದರು.

ಪ್ರದರ್ಶನದ ನಂತರ ತಾಲ್ಲೂಕು ಕಚೇರಿ ಎದುರು ಬಹಿರಂಗ ಸಭೆ ನಡೆಸಲಾಯಿತು. ಸರ್ಕಾರದ ಸುಳ್ಳು ಆಶ್ವಾಸನೆ ಮತ್ತು ಕ್ರೂರ ಕೃತ್ಯದಿಂದ ಮನೆಗಳನ್ನು ಕಳೆದುಕೊಂಡ ದೊಡ್ಡ ಮಳಲವಾಡಿ ಗ್ರಾಮದ ದಲಿತರಿಗೆ ಈ ಮೊದಲೆ ನಿಗದಿಪಡಿಸಿದ್ದ ಜಾಗದಲ್ಲಿ ಪುನರ್ ವಸತಿ, ಕುಡಿಯುವ ನೀರಿನ ಸೌಲಭ್ಯ ಮತ್ತು ಬಸವನಮತ್ತಿಕೆರೆ ಗ್ರಾಮ. ಮತ್ತಿತರ ಹಳ್ಳಿಗಳಲ್ಲಿ ಈಗಾಗಲೆ ದಲಿತರು ಉಳುಮೆ ಮಾಡುತ್ತಿರುವ ಭೂಮಿಗೆ ಕೂಡಲೇ ಹಕ್ಕು ಪತ್ರಗಳನ್ನು ನೀಡಬೇಕೆಂದು ಸರ್ಕಾರವನ್ನು ಒತ್ತಾಯ ಪಡಿಸಲಾಯಿತು.

ದಾಸನಪುರದಲ್ಲಿ ಕೊಲೆಗೀಡಾದ ಚಿಕ್ಕತಮ್ಮಯ್ಯ ಅವರ ವಿಧವೆ ಪತ್ನಿ ಜಯಮ್ಮ ಅವರ ಜೀವನ ಪರ್ಯಂತ ಪರಿಹಾರ ನೀಡಬೇಕೆಂದು ಮತ್ತು ಕೊಲೆ ಅಪರಾಧಿಗಳಿಗೆ ಶಿಕ್ಷೆ ವಿಧಿಸಬೇಕೆಂದೂ ಒತ್ತಾಯಿಸಲಾಯಿತು.

ಈ ಹೋರಾಟದ ಅಂಗವಾಗಿ ಕುಣಿಗಲ್ ತಾಲ್ಲೂಕಿನಲ್ಲಿ ಈಗ ದಲಿತ ಸಂಘರ್ಷ ಸಮಿತಿ ಶಾಖೆಯೊಂದನ್ನು ಆರಂಭಿಸಲಾಗಿದೆ.

# ಭೂಮಿ ಅಕ್ರಮ : ದಲಿತನ ಮೇಲೆ ದೌರ್ಜನ್ಯ

[ವರದಿ : ದೇ. ಮಹಾದೇವಯ್ಯ]

ಕನಕಪುರ ತಾಲ್ಲೂಕು ಕೆಂಪೇಗೌಡನ ದೊಡ್ಡಿ ಗ್ರಾಮದ 50 ವಷ್ಟದ ಹರಿಜನ ಮೂಗೈದ ಎಂಬಾತನು ತನ್ನ ಜಮೀನಿನಲ್ಲಿ ಉಳುಮೆ ಮಾಡುತ್ತಿದ್ದಾಗ ಭೂಮಾಲಿಕ ಒಕ್ಕಲಿಗರಾದ ಪುಟ್ಟಯ್ಯ ಮತ್ತು ಮರಿಗೌಡ ಎಂಬ ಸಹೋದರರು ಈ ಜಮೀನು ತಮಗೆ ಸೇರಬೇಕೆಂದು ಆತನ ಮೇಲೆ 3–5–78ರಂದು ದೌರ್ಜನ್ಯ ಎಸಗಿದ್ದಾರೆ.

ಎರಡು ಎಕರೆ 21 ಗುಂಟೆ ಜಮೀನು ಹೊಂದಿದ್ದ ಮೂಗೈದ ಮತ್ತು ಆತನ ಅಣ್ಣ ತಲಾ ಒಂದೊಂದು ಎಕರೆಯಂತೆ 2 ಎಕರೆಯನ್ನು ಪುಟ್ಟಯ್ಯ ಮತ್ತು ಮರಿಗೌಡನ ತಂದೆಗೆ ಮಾರಿದ್ದರು. ಉಳಿದಿದ್ದ 21 ಗಂಟೆ ಜಮೀನಿನಲ್ಲಿ ಮೂಗೈದನೇ ವ್ಯವಸಾಯ ಮಾಡುತ್ತಿದ್ದ.

ಈ ಹಿಂದೆ ತಮ್ಮ ಮನೆಯಲ್ಲಿ ಜೀತಕ್ಕಿದ್ದ ಮೂಗೈದನಿಂದ ಉಳಿದುಳಿದ 21 ಗಂಟೆ ಜಮೀನನ್ನು ಕಿತ್ತುಕೊಳ್ಳಲು ಪುಟ್ಟಯ್ಯ ಮತ್ತು ಮರಿಗೌಡ ಯತ್ನಿಸಿದ್ದಾರೆ.

ಈ 21 ಗಂಟೆ ಜಮೀನಿಗೆ ಸಂಬಂಧಿಸಿದ ಎಲ್ಲಾ ದಾಖಲು ಪತ್ರಗಳು ಮೂಗೈದನ ಹೆಸರಿನಲ್ಲೆ ಇದೆಯಾದರೂ ಅಕ್ರಮವಾಗಿ ಆ ಭೂಮಿ ಸಾಗುವಳಿ ಮಾಡಿ ಸ್ವಾಧೀನಪಡಿಸಿಕೊಳ್ಳಲು ದೌರ್ಜನ್ಯಕಾರರು ಆತನಿಗೆ ಕಿರುಕುಳಕೊಡುತ್ತಿದ್ದಾರೆ.

ಇತ್ತೀಚೆಗೆ ಮೂಗೈದನ ಮೇಲೆ ದೌರ್ಜನ್ಯ ನಡೆಸಿ ರಕ್ತಬರುವ ಹಾಗೆ ಹೊಡೆದಿರುವ ಪುಟ್ಟಯ್ಯ ಮತ್ತು ಮರಿಗೌಡ ಊರಿನಲ್ಲಿರುವ 30 ಮಂದಿ ಹರಿಜನರ ಜೀವಕ್ಕೂ ಬೆದರಿಕೆ ಹಾಕಿದ್ದಾರೆ. ಈನಡುವೆ ಮೂಗೈದನ ಕೊಲೆ ಸಂಚು ನಡೆದಿದೆ. ಈ ಘಟನೆ ತಿಳಿದು ರಾಜ್ಯ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಮತ್ತು ಮಳವಳ್ಳಿಯ ದಲಿತ ಯುವಕರು ಅಲ್ಲಿಗೆ ಭೇಟಿ ನೀಡಿದಾಗ ಜನ ಭಯಗ್ರಸ್ತರಾಗಿರುವುದು ಕಂಡುಬಂದಿದೆ.

ಜಮೀನು ಮಳವಳ್ಳಿ ತಾಲ್ಲೂಕಿಗೆ ಸೇರಿರುವುದರಿಂದ ಮೂಗೈದ ತನ್ನ ಮೇಲೆ ನಡೆದ ದೌರ್ಜನ್ಯದ ಬಗ್ಗೆ ಮಳವಳ್ಳಿ ಪೊಲೀಸರಿಗೆ ಮತ್ತು ಮಂಡ್ಯ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಡ್ ಅವರಿಗೆ ದೂರು ನೀಡಿದ್ದರು. ದಲಿತರಿಗೆ ರಕ್ಷಣೆ ನೀಡುವಲ್ಲಿ ಅಲಕ್ಷ್ಯ ತೋರಿದ್ದಾರೆ.

# ಬ್ರಾಹ್ಮಣ ಆರೆಸೆಸ್ಸಿಗರ ತಲೆಯೊಳಗೆ

ಆರ್.ಎಸ್.ಎಸ್. ಪತ್ರಿಕೆ 'ವಿಕ್ರಮ' ವಿಜಯ ದಶಮಿ 1978ರ ವಿಶೇಷಾಂಕದಲ್ಲಿ "ಸಾಕು, ವಿಧ್ವಂಸಕ ರಾಜಕಾರಣ ಬೇಕು ವಿಧಾಯಕ ದೃಷ್ಟಿ ಕೋಣ" ಎಂಬ ಲೇಖನವನ್ನು ಹೊ. ವೆ. ಶೇಷಾದ್ರಿ ಎಂಬ ಆರೆಸೆಸ್ಸಿಗರು ಬರೆದಿದ್ದಾರೆ. ಹರಿಜನ, ಗಿರಿಜನ ಮತ್ತು ಹಿಂದುಳಿದ ವರ್ಗಗಳ ಬಗ್ಗೆ ಜಾತಿವಾದಿಗಳು ಹೇಗೆ ಯೋಚಿಸುತ್ತಾರೆಂಬುದಕ್ಕೆ ಈ ಲೇಖನ ಒಳ್ಳೆಯ ಉದಾಹರಣೆ. ಟನ್ ತೂಕ ದಿಂದ ಹಿಡಿದು ಮಿಲಿಗ್ರಾಂ ತೂಕದವರೆಗಿನ ಬ್ರಾಹ್ಮಣ ನಾಯಕರು ಹೆಚ್ಚು ಕಮ್ಮಿ ಒಂದೇ ಪ್ರವೃತ್ತಿಯನ್ನು ರೂಢಿಸಿಕೊಂಡಿರುತ್ತಾರೆ. ಆ ಪ್ರವೃತ್ತಿ ವ್ಯಕ್ತಗೊಂಡಿರುವ ಶೇಷಾದ್ರಿ ಲೇಖನದ ಕೆಲವು ಸ್ಪಷ್ಟ ಸಾಲುಗಳನ್ನು ನೋಡಿ :

"ಇಂದು ನಮ್ಮ ದೇಶಾದ್ಯಂತ ಭುಗಿಲೆದ್ದಿರುವ ಪ್ರಶ್ನೆ ಒಂದಿದೆ. ಹರಿಜನ ಗಿರಿಜನ ಮತ್ತು ಹಿಂದುಳಿದ ವರ್ಗದವರಿಗೆ ಜಾಗಗಳನ್ನು ಕಾದರಿಸುವ ಪ್ರಶ್ನೆ. ಬಿಹಾರಿನಲ್ಲಿ ಈ ಸಂಬಂಧವಾಗಿ ಉಗ್ರ ಆಂದೋಳನವೇ ನಡೆಯಿತು. ಹಿಂಸೆ ದಂಗೆಗಳು ತಾಂಡವಾಡಿದವು. ಇತರ ಪ್ರಾಂತ್ಯ ಗಳಲ್ಲಿಯೂ ಒಳಗಿಂದ ಒಳಗೇ ಕುದಿಯ ತೊಡಗಿದೆ ಈ ಪ್ರಶ್ನೆ. ಜ್ವಾಲಾಮುಖಿಯ ಬಸಿರಲ್ಲಿನ ಲಾವಾ ರಸದಂತೆ. ಎಂದು, ಎಲ್ಲಿ, ಯಾವ ನೆವದಲ್ಲಿ, ಅದು ಸ್ಫೋಟಗೊಳ್ಳುತ್ತದೋ ಹೇಳಲು ಬರುವಂತಿಲ್ಲ."

"ಈಗ ರಾಜ್ಯ ಸರಕಾರಗಳು ಜಾತಿಯನ್ನೆ ಆಧರಿಸಿ 'ಹಿಂದುಳಿದ ವರ್ಗ'ಗಳನ್ನು ಗೊತ್ತುಪಡಿಸ ತೊಡಗಿವೆ. ಅದರ ಒಂದು ಪ್ರತಿಕ್ರಿಯೆಯೇ ಬಿಹಾರದಲ್ಲಿ ಸಿಡಿದದ್ದು".

"'ಜಾಗ ಕಾದಿರಿಸುವ' ರಾಜ್ಯಾಂಗ ವಿಧಿ 10ವರ್ಷ ಮಾತ್ರ ಜಾರಿಯಲ್ಲಿ ಇರತಕ್ಕದ್ದು ಎಂದು ಸರ್ವಾನುಮತದಿಂದ ತೀರ್ಮಾನವಾಯಿತು. ಆದರೆ 10 ವರ್ಷದ ಆ ಅವಧಿ ಕಳೆದ ಬಳಿಕ ಮತ್ತೆ ಅದಕ್ಕೆ 20 ವರ್ಷ ಜೀವದಾನ ಮಾಡಲಾಯಿತು. ಸದ್ಯಕ್ಕಂತೂ, ಅದನ್ನು ಮತ್ತೆ ವಿಸ್ತರಿಸುವುದು ಖಚಿತ ಎಂದೇ ತೋರುತ್ತಿದೆ. ಇಂಥ ಕ್ರಮದಿಂದ ಉಳಿದ ವರ್ಗಗಳಿಗೆ ಅನ್ಯಾಯ ಆಗುವುದಿಲ್ಲವೆ ? ಈ ವರ್ಗ ಜಾತಿಗಳಿಗೆ ಸೇರಿದ ಪೂರ್ವಿಕರು ಮಾಡಿದ ಅನ್ಯಾಯಕ್ಕಾಗಿ ಈಗ ತಾವು ಪ್ರಾಯಶ್ಚಿತ್ತ ಅನುಭವಿಸಬೇಕೆ ? ಅಜ್ಜ ಮುತ್ತಜ್ಜರು ಮಾಡಿದ ಅಪರಾಧಕ್ಕೆ ಮೊಮ್ಮಕ್ಕಳು–ಮರಿ ಮಕ್ಕಳಿಗೆ ಸಜಾ ವಿಧಿಸುವುದು ಎಲ್ಲಿಯ ನ್ಯಾಯ ? ಯಾವ ಕಾಡಿನ ನಿಯಮ ?"

"ಒಮ್ಮೆ ವಿಶೇಷ ರಕ್ಷಣೆ–ಸೌಲಭ್ಯಗಳಿಗೆ ಒಗಿ ಹೋದರೆಂದರೆ ಅವನ್ನು ಬಿಟ್ಟುಕೊಡಲು ಯಾರೂ ಸಿದ್ಧರಾಗುವುದಿಲ್ಲ. ಅವನ್ನು ಉಳಿಸಿಕೊಂಡು ಹೋಗುವುದರಲ್ಲಿ ಅವರ ಪಟ್ಟಭದ್ರ ಹಿತಾಸಕ್ತಿ ಬೆಳೆಯುತ್ತದೆ. 'ಹಿಂದುಳಿದವರು' ಉಳಿದೆಲ್ಲರೊಂದಿಗೆ ಸರಿಸಮವಾಗಿ ಬಂದು ನಿಲ್ಲಲು ನೆರವಾಗಲಿ ಎನ್ನುವ ಆಸೆಯಿಂದ ಸೃಷ್ಟಿಯಾದ 'ವಿಶೇಷ ರಕ್ಷಣೆ'ಯೇ ಆ ಉದ್ದೇಶಕ್ಕೆ ಮಾರಕ ಆಗುತ್ತದೆ."

ಈ ಮೇಲಿನ ಮಾತುಗಳೆಲ್ಲಾ ಒಂದು ರೀತಿಯವಾದರೆ ಇನ್ನು ಹರಿಜನ ಗಿರಿಜನರ ಪ್ರತಿಭೆ ಅರ್ಹತೆಗಳ ಬಗ್ಗೆ ಬ್ರಾಹ್ಮಣ ಮನಸ್ಸು ಬರೆದಿರುವ ಮಾತುಗಳನ್ನು ಓದಿ :

"ಸವಲತ್ತು, ರಕ್ಷಣೆಗಳನ್ನು ಒದಗಿಸುವುದರಿಂದ ಆ ವರ್ಗಗಳು ತಮ್ಮ ಯೋಗ್ಯತೆಯನ್ನು ಬೆಳೆಸಿಕೊಳ್ಳಲು ಸಹಾಯಕ ಆದೀತು ಎನ್ನುವ ... ಎಷ್ಟರ ಮಟ್ಟಿಗೆ ಫಲಪ್ರದ ಆಗಿದೆ ? ಶಿಕ್ಷಣ... ದಲ್ಲಿ ತೋರಿಬರುತ್ತಿರುವ ಪ್ರವೃತಿಗಳನ್ನು ... ಸಿದರೆ ನಿಜಕ್ಕೂ ಗಾಬರಿ ಆಗುವಂತಿದೆ. ಕಾ... ಗಳಲ್ಲಿ ಜಾಗಗಳನ್ನು ಕಾದರಿಸುವುದಂತೂ ... ಆ ವರ್ಗಗಳ ವಿದ್ಯಾರ್ಥಿಗಳನ್ನು ಆ 'ಕಾದಿ... ಮಟ್ಟ'ಕ್ಕೆ ಏರಿಸಲು ಅನುಸರಿಸಲಾಗುವ ವಿ... ಗಳೂ ವಿಚಿತ್ರವಾಗಿವೆ. ಉಳಿದ ವಿದ್ಯಾರ್ಥಿ... ವೈದ್ಯಕೀಯ ಕಾಲೇಜುಗಳಿಗೆ ಸೇರಲು, ...

ಭಕ್ತರಾಮೇಗೌಡ

ಶೇ. 85 ಅಂಕಗಳು ಬೇಕಾಗಿವೆ, ಎನ್ನಿ. ಕಾ... ವರ್ಗದವರಿಗೆ ಶೇ. 45 ಸಾಕಾಗಬಹುದು. ... ಶೇ. '45' ರ ಮಟ್ಟವನ್ನು ಮುಟ್ಟಲು ಸಹ... ವಿದ್ಯಾರ್ಥಿಗಳಿಗೆ ಯಾವ ಯಾವ ರೀತಿ... 'ರಕ್ಷಣೆ' ಒದಗಿಸಲಾಗುತ್ತಿದೆ. ?"

# ದಿಕ್ಕುತಪ್ಪಿದ ಮೋರನೂರು ದಲಿತ...

(ವರದಿ : ಸಿ.ಮಹದೇವಪ್ಪ)

ಕೊಳ್ಳೇಗಾಲ ತಾಲ್ಲೂಕು ಶ್ರೀರಾಮಪುರದ ಪಕ್ಕ ಗೋಪಿಸೆಟ್ಟಳ್ಳಿಯಲ್ಲಿ 150ಕ್ಕೂ ಹೆಚ್ಚು ಹರಿಜನ ಕುಟುಂಬಗಳಿವೆ. ಬಹುತೇಕ ಗುಡಿಸಲುವಾಸಿಗಳಾಗಿರುವ ಇವರಲ್ಲಿ ಓದಿರುವವರು ಇಲ್ಲವೇ ಇಲ್ಲ. ಅವರ ಊಟ, ಬಟ್ಟೆ ಬರಿಯ ಪರಿಸ್ಥಿತಿಯನ್ನು ನೆನೆಸಿ ಕೊಂಡರೆ ಕರುಳುರಿಯುವಂತಾಗುತ್ತದೆ. ಹೀಗಾಗಿಯೂ ಹಾಲಿ ವಾಸವಾಗಿರುವ ಗೋಪಿಸೆಟ್ಟಳ್ಳಿ ಇವರ ಸ್ವಂತ ನೆಲೆಯೂ ಆಗಿಲ್ಲ.

ಇವರ ಸ್ವಂತ ನೆಲೆ ಮೋರನೂರು (ಈಗಿರುವ ವಾಸಸ್ಥಳದಿಂದ 5 ಮೈಲಿ ದೂರದಲ್ಲಿದೆ). ಇದರ ಸುತ್ತಲೂ ಬೆಟ್ಟಗುಡ್ಡಗಳು ಆವರಿಸಿವೆ. ಅವರ ಪೂರ್ವಿಕರು ತಗ್ಗುದಿಣ್ಣೆಗಳನ್ನೆಲ್ಲ ಕಡಿದು ಹದ ಮಾಡಿ ಬೇಸಾಯದ ಭೂಮಿಯನ್ನಾಗಿ ಮಾಡಿ ಕೊಂಡರು. ಅದರ ಫಲವನ್ನು ಉಂಡು ಅಲ್ಲಿಯ ಹರಿಜನರು ನಿರಾಂತಕವಾಗಿ ಜೀವನ ಸಾಗಿಸುತ್ತಿದ್ದರು.

ಹೀಗಿರಲು ಕೆಲವು ವರ್ಷಗಳ ಹಿಂದೆ ಮಳೆಬಾ... ಕ್ಷಾಮ ತಲೆದೋರಿತು. ವ್ಯವಸಾಯವನ್ನೇ ನ... ಕುಳಿತಿದ್ದ ಎಲ್ಲ ಬಡರೈತರು ದಿನಕಳೆದಂತೆ ಹೊ... ಗಿಲ್ಲದೆ ತತ್ತರಿಸುವಂತಾದರು. ತಮ್ಮ ವ... ಳೊಂದಿಗೆ ಗಂಟು ಮೂಟೆ ಕಟ್ಟಿಕೊಂಡು ಮೋ... ನೂರನ್ನು ಬಿಟ್ಟು ಒಬ್ಬೊಬ್ಬರಂತೆ ಖಾಲಿಯ... ತೊಡಗಿದರು. ಹೀಗೆ ವಲಸೆ ಬಂದ ಕೆಲವ... ಗೋಪಿಸೆಟ್ಟಳ್ಳಿಯಲ್ಲಿ ತಳವೂರಿದರು.

ಮೋರನೂರನ್ನು ಬಿಟ್ಟು ಹೋದ ಮೇಲೆ ಅರ... ಇಲಾಖೆಯವರ ಕಣ್ಣು ಆ ಜಮೀನಿನ ಮೇ... ಬಿತ್ತು. ಹಲವಾರು ವರ್ಷಗಳಿಂದ ದುಡಿ... ಹಸನು ಮಾಡಿದ್ದ ಮೋರನೂರ ಅಥವಾ ಗೋ... ಸೆಟ್ಟಳ್ಳಿಯ ದಲಿತರ ಸ್ವಂತ ನೆಲವನ್ನು ಅವ... ಗೊತ್ತಿಲ್ಲದಂತೆ ಅರಣ್ಯ ಇಲಾಖೆಯವರು ... ಮಿಸಿಕೊಂಡರು. ಈ ಅಕ್ರಮ ಜಮೀನನ್ನು ಅಲ್ಲಿ... ಬಹುತೇಕ ಭೂಸ್ವಾಮಿಗಳಾದ ಲಿಂಗಾಯಿತ... ಕುತಂತ್ರದಿಂದ ದೋಚಿಕೊಳ್ಳಲಾರಂಭಿಸಿದರು.

ಇದೇ ಸಮಯಕ್ಕೆ ಆಗಿನ ಪ್ರ ಧಾ ನಿ ಯಾ ಗಿ... ಇಂದಿರಾಗಾಂಧಿ ಮತ್ತು ದೇವರಾಜ ಅರಸು ಕಾ...

# ...ವುದು ಮಿದುಳೋ? ಕಕ್ಕಸ್ಸೋ?

...ಅಸಹ್ಯ ಮನಸ್ಸಿನ ಅವಾಸ್ತವ ಪ್ರಲಾಪವನ್ನು ...ಳ್ಳಿ ಎಂದು ಹೇಳುವ ಕಷ್ಟಕ್ಕೆ ಹೋಗಲೇ ...ಕಾಗಿಲ್ಲ. ಇನ್ನೂ ಬಲಗೊಳ್ಳುವ ವಾಕರಿಕೆ ...ನ್ನು ನೋಡಿ ;

...ಷ್ಟೋ ಕಡೆ ಮಾಸ್ತರರು ಪರೀಕ್ಷಾ ಭವನದಲ್ಲಿ ...ರಿಜನ ವಿದ್ಯಾರ್ಥಿಗಳ ಬಳಿ ಹೋಗಿ "ಹೀಗಲ್ಲ, ...ಗೆ ಬರಿ" ಎಂದು ತಿದ್ದಿಸಿ ಬರೆಸುವುದುಂಟು. ...ದೂ ಅವರಿಗೆ ಅರ್ಥವಾಗದೆ ಇದ್ದರೆ ಮಾಸ್ತ...ರು ತಾವೇ ಸ್ವತಃ ತಿದ್ದುವುದೂ ಉಂಟು. ...ರಕಾರಿ ಸ್ತರದ ಪರೀಕ್ಷೆಗಳನ್ನು ಬಿಟ್ಟು ಮಿಕ್ಕ ...ಲಾ ಮಟ್ಟದ ಪರೀಕ್ಷೆಗಳಲ್ಲಂತೂ ಹರಿಜನ ಗಿರಿ...ನ ವಿದ್ಯಾರ್ಥಿಗಳನ್ನು ನಾಪಾಸು ಮಾಡಿಸಲೇ ...ರದೆಂಬ ಅಘೋಷಿತ ಸೂಚನೆಯೇ ಇದೆ. ...ಮ್ಮ ರಾಜ್ಯದಲ್ಲಿ, ಒಬ್ಬ ಶಿಕ್ಷಕರು ಹರಿಜನ ...ದ್ಯಾರ್ಥಿಗಳ "ಫಲಿತಾಂಶದ ಮಟ್ಟ"ವನ್ನು ಏರಿಸಿ ...ರ ಫಲವಾಗಿ ಅವರು 'ಆದರ್ಶ ಶಿಕ್ಷಕ' ಎನ್ನುವ ...ಷ್ಟ್ರ ಪ್ರಶಸ್ತಿಯನ್ನು ಗಿಟ್ಟಿಸಿಕೊಂಡರು !"

## ...ೋಳು

...ತ್ತ ಭೇಟಿಕೊಟ್ಟಿದ್ದಾಗ ಗೋಪಿಸೆಟ್ಟಳ್ಳಿಯಲ್ಲಿ ... ಹರಿಜನರು ಜಮೀನು ಕೊಡಿಸುವಂತೆ ಮೊರೆ ...ಟ್ಟ ಮನವಿ ಸಲ್ಲಿಸಿದ್ದರು. ಆಗ ಮಂತ್ರಿಗಳು ...ರನೂರಿನ ಪಾಳುಮನೆಗಳು. ರಾಗಿ ಜೋಳದ ...ಗಳು ಇರುವ ಗುರುತನ್ನು ಕಣ್ಣಾರೆಕಂಡರು. ...ನನ್ನು ಕೊಡಿಸುವಂತೆ ಆಶ್ವಾಸನೆಕೊಟ್ಟರು. ...ಸನೆಗಳೆಲ್ಲ ದಲಿತರಿಗೆ ಬದಲಾಗಿ ಅದೇ ...ನ ಭೂಸ್ವಾಮಿಗಳ ಕಿವಿ ಸೇರಿದವು. ...ನು ಕೊಡಿಸುತ್ತೇವೆಂದು ನಾನು–ತಾನು ... ಮುಂದೆ ಬಂದ ಶಾಸಕರುಗಳು ಹರಿಜನರಿಂದ ...ಕ್ಕ ಸಾವಿರ ರೂಪಾಯಿಗಳನ್ನು ಕಬಳಿಸಿದರು. ... ಬದುಕು ಮತ್ತಷ್ಟು ಮೋಸಕ್ಕೊಳ...ತು.

...ಪಿಸೆಟ್ಟಳ್ಳಿಗೆ ಬಂದರೂ ರೈತರಿಗೆ ಕೂಲಿ ...ಯುದಾಯಿತು, ಅಲ್ಲಿಯ ಕೆಲವು ಕಂಟ್ರಾ...ಗಳ ಕಣ್ಣು ಇವರ ಮೇಲೆ ಬಿತ್ತು. ಅಂದಿ... ಅವರ ಕೆಲಸ ಬಂಡೆಗಲ್ಲುಗಳನ್ನು ಒಡೆಯು... ಈ ಕೂಲಿ ಅವರ ಹಸಿವನ್ನು ಕಡಿಮೆ ...ವಂತಿರಲಿಲ್ಲ. ಹಗಲು ರಾತ್ರಿ ಕೂಲಿ

"ಓದದೆ, ಅಂಕಗಳಿಸದೆ, ಯೋಗ್ಯತೆ ಬೆಳೆಸಿಕೊಳ್ಳದೆಯೇ ಉಚ್ಚವ್ಯಾಸಂಗದ ಕಾಲೇಜುಗಳಲ್ಲಿ ಜಾಗ, ತೇರ್ಗಡೆ ಕೈಗೆ ಸಿಕ್ಕುವಾಗ ಇನ್ನು ಕಷ್ಟಪಟ್ಟು ಓದಿ ವಿದ್ಯಾವಂತರಾಗುವ ಗೋಜಿಗೆ ಯಾರು ಹೋಗುವರು ? ಕಷ್ಟವಿಲ್ಲದೆ, ಯೋಗ್ಯತೆ ಇಲ್ಲದೆ, ಕೇವಲ ತಮ್ಮ ಜಾತಿಯ ಬಲದಿಂದ ತಾವು 'ಮೇಲಕ್ಕೆ' ಹೋಗಬಲ್ಲೆವು. ಎನ್ನುವ ಅರಿವು ಒಮ್ಮೆ ಅವರಲ್ಲಿ ಬೇರು ಬಿಟ್ಟಲ್ಲಿ ಜಾತಿ ಭಾವನೆ ಹೋಗುವುದು ಹೇಗೆ ? ಸರಿಸಮಾನತೆ ಎಂದರೆ ಅದು ಕಷ್ಟದ ಹಾದಿ. ಯೋಗ್ಯತೆಯ ಬಲದ ಮೇಲೆ ಮೇಲಕ್ಕೆ ಬರುವ ಹಾದಿ. ಆ ತಾಪತ್ರಯ ಏಕೆ ? ಹೀಗೆಯೇ 'ಹಿಂದುಳಿದಿರುವುದರಲ್ಲೇ' ಹಾಯಾಗಿ ಇರಬಹುದು."

ಕಿಂಚಿತ್ತು ತಿಳಿವಳಿಕೆ ಇದ್ದವರಿಗೆಲ್ಲ ಈ ನಿರಾಧಾರಿತ ಆಲೋಚನೆಗಳ ಜೊಳ್ಳುತನ ಅರಿವಾಗುತ್ತದೆ. ಮೊದಲಿನಿಂದ ಈ ದೇಶದಲ್ಲಿ ಅಧ್ಯಾಪನ ವೃತ್ತಿ ನಡೆಸಿಕೊಂಡು ಬಂದವರು ಹರಿಜನ ಗಿರಿಜನರಲ್ಲ ;

**ವಿಶೇಷ ವರದಿ**

ಮಾಡಬೇಕು. ಇಲ್ಲವಾದರೆ ಕೂಲಿ ಹಣ ಕೊಡುವುದಿಲ್ಲ ಎಂಬ ಬೆದರಿಕೆ. ಹೀಗೆ ತಮ್ಮ ಜೀವವನ್ನೇ ತೇದು ನಯಗೊಳಿಸಿದ ಕಲ್ಲುಗಳಲ್ಲಿ ನಿತ್ರಾಣಗೊಂಡ ಹಸಿವಿನ ಮುಖಗಳನ್ನು ಕಾಣುವಂತಾಯಿತು.

ಕಂಟ್ರಾಕ್ಟರುಗಳು ಈ ನಯವಾದ ಕಲ್ಲುಗಳನ್ನು ಹೊರಪ್ರದೇಶಗಳಿಗೆ ಕಳುಹಿಸಿ ಹೆಚ್ಚು ಹೆಚ್ಚು ಲಾಭಪಡೆಯುತ್ತಿದ್ದಾರೆ. ಬಂಡೆಕಲ್ಲುಗಳ ಸಿಡಿತಕ್ಕೆ ಸಿಕ್ಕಿ ಸತ್ತ ಹುಡುಗರು, ಮುದುಕರು ಎಷ್ಟೋ ಏನೋ ? ಕೂಲಿ ದೊರೆದರೆ ಉಂಟು ಇಲ್ಲ, ಅಂದರೆ ಹೊಟ್ಟೆಗೆ ಸೊನ್ನೆ. ಅತ್ತ ಸ್ವಂತ ಜಮೀನು ದೊರೆಯದೆ, ಇತ್ತ ಈ ಕೂಲಿ ಕೆಲಸದಿಂದ ಬಿಡಿಸಿಕೊಳ್ಳಲಾರದೆ ಒದ್ದಾಡುತ್ತಿದ್ದಾರೆ. ಗೋಪಿಸೆಟ್ಟಳ್ಳಿ ಅಥವಾ ಮೋರನೂ ಬಡವರರು ಬವಣೆ ತಪ್ಪಲಿಲ್ಲ.

'ನರಿಜನ' ಎನ್ನಬಹುದಾದ ಹಾರುವ ಜನ. ಪಠ್ಯ ಪುಸ್ತಕ ಬರೆದವರು, ಪಠ್ಯ ವಿಷಯ ಗೊತ್ತುಮಾಡಿದವರು, ಪರೀಕ್ಷಾ ಪದ್ಧತಿ ರೂಪಿಸಿದವರು ಆ ಅಲ್ಪ ಜನವೇ. ದೇಶದ ಶೇ. 96 ಜನರ ಅಗತ್ಯ, ಆಶಯಗಳನ್ನು ಅರಿತುಕೊಳ್ಳುವ ಸಮಗ್ರ 'ಪಾಂಡಿತ್ಯ' ಎಂದೂ ಅವರಲ್ಲಿರಲಿಲ್ಲ. ನಮ್ಮ ಶೈಕ್ಷಣಿಕ ಅಧಃಪತನಕ್ಕೆ ಕಾರಣರಾದ ಈ ಜನ ತಮ್ಮ ಸನಾತನ ದೌರ್ಬಲ್ಯವನ್ನು ಮುಚ್ಚಿಡಲು 'ಯೋಗ್ಯತೆ ಅರ್ಹತೆ'ಗಳ ಮಾತನಾಡುತ್ತಿರುವುದು ತಮಾಷೆಯಾಗಿದೆ. ಪರೀಕ್ಷೆಗಳಲ್ಲಿ ಹೇಳಿಕೊಡುವ ಕೆಲಸವನ್ನು ಮಾಡಲು ಸಾಧ್ಯವಾಗಿದ್ದರೆ ಅದು ಅವರ (ಜಾತಿಯ) ಮಕ್ಕಳಿಗೆ ಎಂಬುದರಲ್ಲಿ ಅನುಮಾನವಿಲ್ಲ. ಹುಟ್ಟಿನಿಂದಲೇ ತಮ್ಮ ಜಾತಿಯ ಹೆಸರಿನಿಂದ 'ಕಷ್ಟವಿಲ್ಲದೆ ಯೋಗ್ಯತೆ ಇಲ್ಲದೆ' 'ಮೇಲೆ' ಇರುವವರಿಗಿಂತ ಜಾತಿಯ 'ಬಲ'ದಿಂದ 'ಮೇಲಕ್ಕೆ' ಹೋಗಬಲ್ಲವರನ್ನು ಖಂಡಿತ ಮೆಚ್ಚಬೇಕು. ಹರಿಜನ ಗಿರಿಜನ ವಿದ್ಯಾರ್ಥಿಗಳನ್ನು ನಾಪಾಸು ಮಾಡಿಸಲೇಬಾರದೆಂಬ ಅಘೋಷಿತ ಸೂಚನೆ ಬ್ರಾಹ್ಮಣನ ತಲೆ ಬಿಟ್ಟು ಬೇರೆ ಎಲ್ಲಿದೆ ಎಂಬುದನ್ನು ನಾನು ಕಂಡಿಲ್ಲ.

ಹರಿಜನ ಗಿರಿಜನ ವಿದ್ಯಾರ್ಥಿಗಳು ಅತ್ಯಂತ ಪ್ರತಿಭಾಸಂಪನ್ನರೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಇದನ್ನು ಗುರುತಿಸಲು ಶುದ್ಧಮನಸ್ಸು ವೈಜ್ಞಾನಿಕ ನೇರ ದೃಷ್ಟಿ ಅಗತ್ಯ. ಉರು ಹೊಡೆಯುವ ಗಿಳಿಯೋದಿನ ಬ್ರಾಹ್ಮಣ ಪ್ರವೃತ್ತಿಗೆ ಸೃಜನಶೀಲ ಚಿಂತನೆ ಎಂದೆಂದೂ ಸಾಧ್ಯವಿಲ್ಲ. ಕಂಠಪಾಠ ಶಾಲೆಯ ಸಿದ್ಧ ಹಸ್ತರಾದ ದ್ವಿಜರು ಸುಳ್ಳು ಸಂಸ್ಕೃತಿಯ ಹಕ್ಕುದಾರರು. ಹಾಗಾಗಿ ಮನುಷ್ಯ ಸಂಬಂಧಿಯಾದ ಶುದ್ಧ ಸಂಸ್ಕೃತಿಯೊಳಗೆ ಬರುವ ಯೋಗ್ಯತೆ ಅರ್ಹತೆಗಳನ್ನು ಸಹಜವಾಗಿ ಮೈಗೂಡಿಸಿಕೊಂಡವರು – ಅಬ್ರಾಹ್ಮಣವಾದ ಶೂದ್ರ ಸಮುದಾಯ. ಶಿಕ್ಷಣ ಕ್ಷೇತ್ರದ ಸ್ಪರ್ಧಾತ್ಮಕ ಸ್ವರೂಪದ ಅರಿವಿದ್ದವನಾರೂ ನೀಚ ಹೇಳಿಕೆಗಳನ್ನು ನೀಡಲು ಹೋಗುವುದಿಲ್ಲ. ಕಾದಿರಿಸಿದ ಸ್ಥಾನಗಳಲ್ಲಿಯೇ ಭಾರೀ ಸ್ಪರ್ಧೆ ಇರುತ್ತದೆ. ಕೆಲವು ವೇಳೆ ಸಾಮಾನ್ಯ ಸ್ಥಾನಗಳ ಅಭ್ಯರ್ಥಿಗಳಿಗಿಂತ ಕಾದರಿಸಿದ ಸ್ಥಾನಗಳ ಅಭ್ಯರ್ಥಿಗಳೇ ಹೆಚ್ಚು ಅಂಕಗಳನ್ನು ಪಡೆದಿರುತ್ತಾರೆ. ಅಂಥ ಸಂದರ್ಭಗಳಲ್ಲಿ ಹೆಚ್ಚು ಅಂಕಗಳನ್ನು ಪಡೆದ ಮೀಸಲು ಅಭ್ಯರ್ಥಿಗಳಿಗೆ ಸಾಮಾನ್ಯ ಸ್ಥಾನಗಳಲ್ಲಿ ಪರಿಗಣಿಸ

(6ನೇ ಪುಟನೋಡಿ)

## ಆರೆಸೆಸ್ಸ್ ಆಲೋಚನೆ....

(ಮಧ್ಯದ ಪುಟದಿಂದ)

ದಿದ್ದರೆ ಮೀಸಲು ಅಭ್ಯರ್ಥಿಗಳಿಗೆ ಅಪಾರ ಅನ್ಯಾಯವಾಗುತ್ತದೆ. ಇನ್ನು ಜಾಗ ಕಾದಿರಿಸುವ ರಾಜ್ಯಾಂಗ ವಿಧಿಯ ಅವಧಿಯ ವಿಸ್ತರಣೆ– ಶೇ. 18ರ ಮೀಸಲಾತಿಯನ್ನು ಭರ್ತಿ ಮಾಡುವ ಕಟ್ಟುನಿಟ್ಟಿನ ಕ್ರಮವನ್ನು ಎಲ್ಲೂ ಪೂರ್ಣವಾಗಿ ಪಾಲಿಸಿಲ್ಲ. ಅದು ಕೇವಲ ಸಂವಿಧಾನದ ಆಶಯವಾಗಿಯೇ ಉಳಿದಿದೆ. ಹಾವನೂರು ಆಯೋಗದ ವರದಿಯಲ್ಲಿನ ಅಂಕಿ-ಅಂಶಗಳನ್ನು ನೋಡಿದರೆ ಈ ಅಂಶ ತಿಳಿಯುತ್ತದೆ. ಕಡ್ಡಾಯ ಮೀಸಲಾತಿ ಭರ್ತಿ ಕೆಲಸವನ್ನು ಮಾಡಬೇಕಾದ ಜನ ಒಂದಲ್ಲ ಒಂದು ಕುತಂತ್ರದ ಮೂಲಕ ಅಡಚಣೆಗಳನ್ನೊಡ್ಡುತ್ತಿದ್ದಾರೆ. ಪಟ್ಟಭದ್ರ ಹಿತಾಸಕ್ತಿಗಳು ಸದಾ ಕಣ್ಣು ತೆರೆದುಕೊಂಡಿವೆ. ಶಿಕ್ಷಣ ಕ್ಷೇತ್ರದಲ್ಲಂತೂ ಪರಿಸ್ಥಿತಿ ದಂಗುಗೊಳಿಸುವಂಥದು. ಮೈಸೂರು ವಿಶ್ವವಿದ್ಯಾನಿಲಯದ 49 ಸ್ನಾತಕೋತ್ತರ ವಿಭಾಗಗಳಲ್ಲಿ ಕೇವಲ 3 ಜನ ಹರಿಜನ ಗಿರಿಜನ ಅಧ್ಯಾಪಕರು ಮಾತ್ರ ಇದ್ದಾರೆ. ಸ್ವಾರ್ಥ ಮತ್ತು ಜಾತಿವಾದದಿಂದ ಶಿಕ್ಷಣ ಕ್ಷೇತ್ರದಲ್ಲಿ ಹರಿಜನ ಗಿರಿಜನರು ಎಂದೂ ಲಾಭ ಪಡೆದಿಲ್ಲ. ಆ ಲಾಭ ಪಡೆದಿರುವವರು ಶಿಕ್ಷಣ ಕ್ಷೇತ್ರದಲ್ಲಿ ಉದ್ದ ಬೇರು ಬಿಟ್ಟುಕೊಂಡವರು.

ಇನ್ನು ನೌಕರಿ ಪಡೆಯುವುದರ ಬಗ್ಗೆ ಈ ಆರೆಸೆಸ್ ಹೇಳುವ ಮಾತುಗಳು ಪಿತ್ತ ನೆತ್ತಿಗೇರಿಸುತ್ತವೆ ;

"ವಿದ್ಯಾಭ್ಯಾಸ ಮುಗಿಸಿ ಸರಕಾರಿ ನೌಕರಿಗಳಿಗೆ ಸೇರುವಾಗಲೂ ಅಷ್ಟೆ. 'ಹಿಂದುಳಿದ ವರ್ಗ'ದವರು ಕಷ್ಟಪಡ ಬೇಕಾಗಿಲ್ಲ. ಅಲ್ಲೂ ಜಾಗ ಕಾದಿರಿಸಲಾಗಿದೆ. ಈಗಂತೂ ಕರ್ನಾಟಕ ಸರ್ಕಾರವು 'ಬಡತಿ'ಗಳಲ್ಲೂ ಜಾಗ ಕಾದಿರಿಸತೊಡಗಿದೆ............... ಈಗ ತನ್ನ ಮೇಲಾಧಿಕಾರಿಯಾಗಿರುವವನ ತಲೆಯ ಮೇಲೆ ನಾಳೆ ತಾನೇ ಹಿರಿಯ ಅಧಿಕಾರಿಯಾಗಿ ಬಂದು ಕೂಡುವನು.......... ಇಂದು ಯಾವುದೇ ಸರಕಾರಿ ಇಲಾಖೆಯಲ್ಲಿ 'ಹರಿಜನ ಗಿರಿಜನ' ನೌಕರರ ಮೇಲೆ ಆಶಿಸ್ತಿಗಾಗಿ ಕ್ರಮ ತೆಗೆದುಕೊಳ್ಳುವ ಧೈರ್ಯ ಯಾರಿಗೂ ಉಳಿದಿಲ್ಲ."

ಹಿಂದುಳಿದ ವರ್ಗಗಳಿಗೆ ನಿರಾಯಾಸವಾಗಿ ನೌಕರಿ ಸಿಕ್ಕುವಂತಿದ್ದರೆ ಅವರಲ್ಲಿ ನಿರುದ್ಯೋಗದ ಸಮಸ್ಯೆಯೇ ಉಳಿದಿರುತ್ತಿರಲಿಲ್ಲ. ಏಪ್ರಿಲ್ 19 ರಂದು ಹರಿಜನ ಕಲ್ಯಾಣ ಸಮಿತಿಯು ವಿಧಾನ ಸಭೆಗೆ ಸಲ್ಲಿಸಿದ ವರದಿಯಂತೆ ಕರ್ನಾಟಕದಲ್ಲಿ 4000 ಹರಿಜನ ಗಿರಿಜನ ಪದವೀಧರರು ನಿರುದ್ಯೋಗಿಗಳಾಗಿದ್ದಾರೆ. 24,000 ಮೆಟ್ರಿಕ್ಯುಲೇಷನ್ ತೇರ್ಗಡೆ ಹೊಂದಿದವರು ನಿರುದ್ಯೋಗಿಗಳಾಗಿದ್ದಾರೆ. ಇದು ಉದ್ಯೋಗ ವಿನಿಮಯ ಕಛೇರಿಗಳ ದಾಖಲಾತಿಯ ಮೇರೆಗೆ.

ಇನ್ನು ನಿಜ ಸ್ಥಿತಿ ಎಷ್ಟು ಗಂಭೀರವೊ. ಕರ್ನಾಟಕ ಸರಕಾರದ 1, 2 ಮತ್ತು 3ನೇ ದರ್ಜೆ ನೌಕರಿಗಳಲ್ಲಿ ಹರಿಜನ ಗಿರಿಜನರಿಗೆ ಒಟ್ಟು ಸರಾಸರಿ ಶೇ. 6ರಷ್ಟು ಸ್ಥಾನಗಳು ಮಾತ್ರ ಲಭ್ಯವಾಗಿವೆ. ಶೇ. 19ರಷ್ಟನ್ನು ಮೀಸಲಾತಿ ಭರ್ತಿಯ ಕಡ್ಡಾಯ ನಿಯಮ ಪಾಲನೆ ಮಾಡಬೇಕಾದ ಸರಕಾರಿ ಕ್ಷೇತ್ರದಲ್ಲಿ ಹೀಗಾದರೆ ಇನ್ನು ಖಾಸಗಿ ಸಂಸ್ಥೆಗಳಲ್ಲಿ ಪರಿಸ್ಥಿತಿ ಹೇಗಿರಬಹುದು ? ಅದರಲ್ಲೂ ಆರೆಸ್ಸೆಸ್ ನವರ ಹಿಡಿತವಿರುವ ಕಡೆ ಕೇಳಲೇ ಬೇಕಾಗಿಲ್ಲ. ಈಗಿನ ಸತ್ಯಸ್ಥಿತಿಯ ಪೂರ್ಣ ಅರಿವು ಮೂಡಿಸಿಕೊಳ್ಳದೆ ಆಡುವ ವಿಷಪೂರಿತ ಮಾತುಗಳಿಂದ ಮಾತನಾಡುವವನ ಮನೋಧರ್ಮ ಮತ್ತು ಅವನ ಆಲೋಚನೆಗಳಿಗೆ ಬಡಿದಿರುವ ಪಾರ್ಶ್ವ ರೋಗಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ಆರೆಸೆಸ್ ನಿಜ ಬಣ್ಣ ಮುಚ್ಚಿದಷ್ಟು ಎದ್ದು ಕಾಣುವಂಥದ್ದು. ಮುಸ್ಲಿಮರನ್ನು ಕ್ರಿಶ್ಚಿಯನ್ನರನ್ನು ಅದು ನೋಡುವ ದೃಷ್ಟಿ—ಅ ಬ್ರಾಹ್ಮಣರಾದ ಶೂದ್ರರು, ಪಂಚಮರು ಎಲ್ಲರನ್ನೂ ಒಳಗೊಳ್ಳುತ್ತದೆ. ಮರಾಠವಾಡ, ಬೆಲ್ಚಿ, ವಿಲ್ಲುಪುರಂಗಳಲ್ಲಿ ನಡೆದ ಹಿಂಸೆ ದೌರ್ಜನ್ಯಗಳನ್ನು ಆರೆಸೆಸ್ ಮನಸ್ಸು ವಿಶ್ಲೇಷಿಸುವ ರೀತಿಯಂತೆ ಅಲ್ಲಿನ ಎಲ್ಲಾ ಅಪರಾಧಗಳಿಗೂ ಕಾರಣರು ಹರಿಜನರು ಮಾತ್ರ, ಅಸ್ಪೃಶ್ಯತೆ ಅಸಮಾನತೆಗಳನ್ನು ತನ್ನ ಜೀವ ಸತ್ವಗಳಾಗಿ ಭಾವಿಸಿರುವ ಹಿಂದೂ ಸಂಸ್ಕೃತಿಯ ಮಾಲಿಕರಿಗೆ ಸಮಸ್ಯೆಯ ಆಳ ಅಗಲಗಳನ್ನು ಯೋಚಿಸಬೇಕಾದ ತಲೆಯಲ್ಲಿ ಮೆದುಳು ಎಲ್ಲಾ ತೊಳೆದು ಹೋಗಿ ಕಕ್ಕಸ್ಸು ಮಾತ್ರ ತುಂಬಿಕೊಂಡಿದೆ.

ಚಾತುರ್ವರ್ಣ್ಯ ವ್ಯವಸ್ಥೆಯ ಹುಟ್ಟಿನ ಕತೆಯಲ್ಲಿ ಬ್ರಹ್ಮನ ಬಾಯಿಂದ ಬ್ರಾಹ್ಮಣರನ್ನು ಕಾಲಿನಿಂದ ಶೂದ್ರರನ್ನು ಹುಟ್ಟಿಸಿರುವುದು ಅರ್ಥವತ್ತಾಗಿದೆ, ತಾವು ಹುಟ್ಟಿದ ಜಾಗದಿಂದ ಅಂದರೆ ಬಾಯಿಂದ ಅವರು ಬೊಗಳುತ್ತಲೆ ಇರುತ್ತಾರೆ. ಆದ್ದರಿಂದ ಶೂದ್ರರು ಹುಟ್ಟಿದ ಜಾಗವನ್ನು ಅಂದರೆ ಕಾಲುಗಳನ್ನು ಬಳಸಲೇ ಬೇಕು. ಅಂದರೆ ಒದೆಯಬೇಕು. ಬೊಗಳುವವರಿಗೆ ಉತ್ತರ ಒದೆಯುವುದು. ಮನುಷ್ಯ ವಿರೋಧಿ ಸಿದ್ಧಾಂತವನ್ನು ಅಲ್ಲಲ್ಲೆ ಗೊಣಗುತ್ತಿರುವ ಅವಶೇಷಗಳು ಈಗ ಸಾಯುವಂತೆ ಒದ್ದಾಡುತ್ತಿರುವುದು ಕಂಡು ಬರುತ್ತಿದೆ. ಮನುಜ ಮತದವರೆಲ್ಲಾ ಒಮ್ಮೆ ಕಣ್ಣು ಕೆಕ್ಕರಿಸಿದರೆ ಹಿಂದೂ ಅವಶೇಷ ನಿಶ್ಶೇಷವಾಗುತ್ತದೆ ಶೇಷಾದ್ರಿಯೂ ಸೇರಿ.

## ಮಿಂಡರಿಗೊಂದೇ ಪ್ರಶ್ನೆ

ನಮ್ಮ ಬತ್ತಲೆ ಮೈ ಮೇಲೆ
ನಿಮ್ಮ ಕಾಮದ ಬೆತ್ತಹಿಡಿದು
ಮೆರವಣಿಗೆ ಮಾಡುವಿರಿ
ನಿಮ್ಮ ಕಾಮ–ಕೇಳಿಯ ಧ್ವಜವ
ನಮ್ಮ ಹೊಟ್ಟೆಯಲಿ ನೆಡುವಿರಿ,
ಮೈ ದೋಣಿಯಲಿ ವಿಹರಿಸುವಿರಿ.
ನಮ್ಮ ಕಷ್ಟವನೆ ತೇದು
ನಿಮಗೆ ಸುಖವ ಲೇಪಿಸುವುದಿಲ್ಲವೆ ನಾವು ?
ಚಂಚಸನೂರ
ಬೀದಿ ಬೀದಿಗಳಲ್ಲಿ
ಬಿರಿದೆದೆಯ ಬಿಚ್ಚಿ
ಬರಿಮೈಯ ಮಾಡುವಿರಲ್ಲ !
ಸೀರೆ ಉರುಚಿ.
ಕಾಣದ ದೇವನ ಹೆಸರಿನಲಿ
ಕಾಣುವ ನಮ್ಮ ಮೈರುಚಿ
ನೋಡುವಿರಿ
ಕತ್ತಲಿನಲಿ ನಮ್ಮ ಮನದ ಪಂಜ–
ನಿಮ್ಮ ಮನದ ಮತಾಪು, ಸುರ್–ಸುರ್-ಬಾಣ
ಹೂ ಕುಡುಕೆಗಳಿಂದು–
ಹತ್ತಿಸಿ, ಧಗಧಗಿಸಿ ಉರಿಸುವಿರಿ
ಗಹಗಹಿಸಿ ನಗುವಿರಿ
ಭೂತ ನೃತ್ಯವ ಗೈಯ್ಯುವಿರಿ.
ನಮ್ಮಾಣೆ
ನಮ್ಮಂಥವರಾಣೆ
ನಮ್ಮ ಮಿಂಡರಿರ
ಧನದ ಮದದ ರಾಜ್ಯಮದದ
ಕುರುಡರಿರ
ನಾವು ಕೇಳುವುದಿಷ್ಟೆ
"ನಿಮ್ಮ ಜೀವನದಿ ಒಮ್ಮೆಯಾದರೂ
ನಿಮ್ಮ ಹೆಂಡಿರ ಬತ್ತಲಾಗಿಸಿ
ಒಂದರಗಳಿಗೆಯಾದರೂ ಬೀದಿಯಲಿ ಬಿಡುವಿರಾ?

—ಕಿಕ್ಕೇರಿ ನಾರಾಯಣ

# ಕೆಲಸಧಿಂದ ದಲಿತನ ವಜಾ : ಕತ್ತುಹಿಸುಕುವ ಕೃತ್ಯಕ್ಕೆ ಕೊನೆ ಎಂದು ?

[ವರದಿ : ಹುಲ್ಲುಕೆರೆ ಮಹಾದೇವ]

ನಮ್ಮ ದೇಶದ ಕಾನೂನು ನೌಕರಿಗಳಲ್ಲಿ ದಲಿತರಿಗೆ ಶೇ. 18 ಮೀಸಲಾತಿ ಇರಬೇಕೆಂದು ಹೇಳಲಾಗಿದೆ. ಆದರೆ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮುವ್ವತ್ತು ವರ್ಷಗಳು ಕಳೆದು ಹೋಗಿದ್ದರೂ ಇನ್ನೂ ಈ ಮೀಸಲಾತಿ ಭರ್ತಿ ಆಗೇ ಇಲ್ಲ. ಅಷ್ಟೆ ಅಲ್ಲ, ನೌಕರಿಗೆ ನೇಮಕ ಮಾಡಿಕೊಂಡ ದಲಿತ ನೌಕರರನ್ನು ಇದಕ್ಕಿದ್ದ ಹಾಗೆ ನೌಕರಿಯಿಂದ ಕಿತ್ತುಹಾಕುವುದು ಮಾಮೂಲಾಗಿದೆ. ಹೀಗಾಗಿ ಎಷ್ಟೋ ದಲಿತ ವಿದ್ಯಾವಂತ ನೌಕರರು ಇಂದು ಅತಂತ್ರರಾಗಿ ಅಲೆಯುವಂತಾಗಿದೆ. ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಗುಮಾಸ್ತೆಯಾಗಿ ಕೆಲಸಮಾಡುತ್ತಿದ್ದ ಹುಣಸೂರು ತಾಲ್ಲೂಕಿನ ಕೆ.ಎಸ್.ನಾಗರಾಜ್ ಎಂಬ ದಲಿತ ನೌಕರ ಇಂದು ಆಡಳಿತವರ್ಗದ ಕುತಂತ್ರದಿಂದ ನೌಕರಿಯನ್ನು ಕಳೆದುಕೊಂಡಿರುವವರಲ್ಲಿ ಒಬ್ಬ.

1977ರಲ್ಲಿ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಹಂಗಾಮಿ ನೌಕರನಾಗಿ ಕೆಲಸಮಾಡುತ್ತಿದ್ದ ನಾಗರಾಜ್ 1978ರ ಜನವರಿ 18ರಂದು ಮೈಸೂರಿನಲ್ಲಿರುವ ಕೇಂದ್ರ ಕಛೇರಿಯಲ್ಲಿ ಮತ್ತೆ ಹಂಗಾಮಿಯಾಗಿ ಎರಡನೇ ದರ್ಜೆ ಗುಮಾಸ್ತೆಯಾಗಿ ನೇಮಕಗೊಂಡ. ಮೂರು ತಿಂಗಳಿಗೊಮ್ಮೆ ರಿಲೀವ್ ಮಾಡಿ ಪುನರ್‌ನೇಮಕ ಮಾಡಿಕೊಳ್ಳುವುದು ನಡೆದಿತ್ತು. ಅದೇ ರೀತಿ 78ರ ಏಪ್ರಿಲ್ ತಿಂಗಳು ಮತ್ತೆ ರಿಲೀವ್ ಮಾಡಲಾಗಿತ್ತು. 78ರ ಮೇ 1ನೇ ತಾರೀಖಿನಂದು ನೌಕರಿಗೆ ಪುನರ್‌ನೇಮಕದ ಆಜ್ಞೆ ಬಂತು. ಆ ಸಂದರ್ಭದಲ್ಲಿ ಕೆ.ಎಸ್. ನಾಗರಾಜ್ ಅವರ ಜೊತೆಗೆ ಇತರ ಎಂಟು ಮಂದಿಯನ್ನು ನೇಮಕ ಮಾಡಿಕೊಳ್ಳುವಂತೆಯೂ ಸೂಚಿಸಲಾಗಿತ್ತು. ಆದರೂ ಅವರನ್ನು ನೇಮಕಮಾಡಿಕೊಳ್ಳದಂತೆ ಮಾಡಿ, ಗುಮಾಸ್ತೆಯವರು ಕೆಲಸದ ಆರ್ಡರ್ ಕಳುಹಿಸಿದ್ದುದು ತಪ್ಪೆಂದು ತೀರ್ಮಾನವಾಗಿತ್ತು. ಆದ್ದರಿಂದ C.E.O. ಅವರು ಕೆಲಸದ ಆರ್ಡರ್‌ನ್ನು ಕಿತ್ತುಕೊಂಡರು.

ಇಷ್ಟಾದ ಮೇಲೆ ನಾಗರಾಜ್ ಇಂದು ನಿರುದ್ಯೋಗಿ. ನಾಗರಾಜ್ ಅವರ ಕೆಲಸಕ್ಕೆ ಕಲ್ಲು ಹಾಕಿದವರು ಅಧ್ಯಕ್ಷರಾದ ಶ್ರೀನಿವಾಸರಾವ್ ರವರೇ ಪ್ರಮುಖ ಕಾರಣ. ನಾಗರಾಜ್‌ರವರಿಗೆ ಆಶ್ವಾಸನೆ ಕೊಟ್ಟನಂತರ ಒಟ್ಟು 24 ಮಂದಿಯನ್ನು ಕೆಲಸಕ್ಕೆ ನೇಮಕಮಾಡಿಕೊಳ್ಳಲಾಗಿದ್ದು, ಅವರಲ್ಲಿ ಹದಿಮೂರು ಮಂದಿ ಬ್ರಾಹ್ಮಣರು, ಒಬ್ಬ ದಲಿತ, ಬೇರೆ ಬೇರೆ ಜಾತಿಯವರು ಉಳಿದ ಹತ್ತು ಸ್ಥಾನಗಳಿಗೆ ನೇಮಕವಾಗಿದ್ದಾರೆ. ಅಲ್ಲದೆ ನಾಗರಾಜ್ ಇದ್ದ ಜಾಗಕ್ಕೆ ಟಿ. ವಿ. ಶ್ರೀನಿವಾಸ್ ರಾವ್‌ರವರ 'ಆಪ್ತರೊಬ್ಬರು' ಬಂದಿರುವುದಾಗಿ ತಿಳಿದುಬಂದಿದೆ.

ಹಿಂದುಳಿದ ಜಾತಿಯವರನ್ನ ಹೀಗೆ ಕಾನೂನಿನ ಸೆರಗಿನೊಳಗೇ ಕತ್ತುಹಿಸುಕುವ ಕೃತ್ಯಕ್ಕೆ ಕೊನೆ ಎಂದು ತಿಳಿಯದಾಗಿದೆ.

# ಸಾಮುತ್ತಡ್ಕದಲ್ಲಿ ದಲಿತರ ಭೂಮಿ ಅಕ್ರಮ ವಿರೋಧಿಸಿ ದ.ಸಂ.ಸ. ಸತ್ಯಾಗ್ರಹ

[ಪಂಚಮ ಪ್ರತಿನಿಧಿಯಿಂದ]

ಪುತ್ತೂರು ಕಸಬಾಗ್ರಾಮ ಸಾಮುತ್ತಡ್ಕದಲ್ಲಿ ಸುಮಾರು 60–70 ವರ್ಷಗಳಿಂದಲೂ ದಲಿತರು ತಮಗೆ ಸೇರಿದ ಅಲ್ಪ ಸ್ವಲ್ಪ ಜಮೀನಿನಲ್ಲಿ ತೆಂಗು, ಗೇರು, ಬಾಳೆ, ಹಲಸಿನ ಮರ ಇತ್ಯಾದಿ ಆಗಮೆ ಹಾಡಿ ಜೀವಿಸುತ್ತಿದ್ದಾರೆ. ಅಂತಹವರಲ್ಲಿ ಮನ್ಸ ಮೇರ ಎಂಬುಹವರೂ ಒಬ್ಬರು, ಆದರೆ ಕಳೆದ ಹರ್ಷದಿಂದ ನೆರೆಯವರಾದ ಶ್ರೀಮತಿ ಬೆನೆಡಿಕ್ಟ ಡಿ'ಸೋಜ ಎಂಬುವವರು ಮನ್ಸದೇರ ಅವರ ಜಮೀನನ್ನು ತಮ್ಮದನ್ನಾಗಿಸಿಕೊಳ್ಳಲು ಅಕ್ರಮವಾಗಿ ಬೇಲಿ ಹಾಕಿ ಆಗಮೆ ಮಾಡ ತೊಡಗಿದ್ದಾರೆ. ಇಂತಹ ಅಕ್ರಮಕ್ಕೆ ಸರ್ಕಾರಿ ಅಧಿಕಾರಿಗಳೇ ಹೊಣೆಗಾರರಾಗಿದ್ದು, ಲಂಚಪಡೆದು ಕುಮ್ಮಕ್ಕು ನೀಡುತ್ತಿದ್ದಾರೆ.

ಮನ್ಸ ಮೇರ ಅವರಿಗಾಗಿರುವಂತೆ ಅನೇಕ ಮುಗ್ಧ ಬಡರೈತರ ಜಮೀನುಗಳನ್ನು ಬೇರೆಯವರ ಹೆಸರಿಗೆ ದರಖಾಸ್ತು ಮಾಡುತ್ತಿದ್ದು ಸರ್ಕಾರಿ ಅಧಿಕಾರಿಗಳು ದಲಿತರಿಗೆ ದ್ರೋಹ ಬಗೆಯುತ್ತಿದ್ದಾರೆಂದು ಹೇಳಲಾಗಿದೆ. ಈ ಸಂಬಂಧದಲ್ಲಿ ಸರ್ಕಾರಕ್ಕೆ ಅನೇಕ ಬಾರಿ ಮನವಿ ಮಾಡಿಕೊಂಡರು ನ್ಯಾಯ ದೊರಕಿಸಿಕೊಡಲು ವಿಫಲವಾದ್ದರಿಂದ ದಲಿತ ಸಂಘರ್ಷ ಸಮಿತಿ ದಕ್ಷಿಣ ಕನ್ನಡ ಶಾಖೆಯು ಏಪ್ರಿಲ್ 30ರಿಂದ ತಾಲ್ಲೂಕು ಕಚೇರಿ ಮುಂದೆ ಕೆಲವು ದಿನಗಳು ಸತ್ಯಾಗ್ರಹ ನಡೆಸಿತು.

ಪ್ರತಿಭಟನೆಯ ಸತ್ಯಾಗ್ರಹದಿಂದಾಗಿ ದಲಿತರಿಗೆ ನ್ಯಾಯ ದೊರೆಯುವ ಭರವಸೆ ಸಿಕ್ಕಿದಂತಾಗಿದೆ.

# ಚಿಂತಾಮಣಿ ದಲಿತರ ಮೇಲೆ ಹಲ್ಲೆ

[ಒಂದನೆ ಪುಟದಿಂದ]

ದೌರ್ಜನ್ಯಕೋರರ ಈ ಎರಡು ಗುಂಪುಗಳು ಹರಿಜನರ ಗುಡಿಸಲು, ಮನೆಗಳ ಮೇಲೆ ಕಲ್ಲು ತೂರಿದ್ದರಲ್ಲದೆ ಬಾಗಿಲುಗಳನ್ನು ಮುರಿದು ಆಸ್ತಿಪಾಸ್ತಿಗೆ ಹಾನಿ ಉಂಟು ಮಾಡಿದ್ದಾರೆ.

ಮೇ 29ರಂದು ಮಧ್ಯಾಹ್ನ 3 ಗಂಟೆ. ಸಮಯದಲ್ಲಿ ಈ ದಾಳಿಕೋರರು ಮೊದಲ ಸುತ್ತಿನ ದೌರ್ಜನ್ಯ ಎಸಗಿ ಪಟೇಲಪ್ಪ, ಕೊಂಡಪ್ಪ ಮತ್ತು ಗಂಗಪ್ಪ ಎಂಬುವವರನ್ನು ತೀವ್ರವಾಗಿ ಗಾಯಗೊಳಿಸಿದ್ದಾರೆ. ಅಂದು ರಾತ್ರಿ ಸುಮಾರು 10 ಗಂಟೆ ಸಮಯದಲ್ಲಿ ಮತ್ತೆ ಎರಡನೇ ಸುತ್ತಿನ ದೌರ್ಜನ್ಯ ನಡೆಸಿ ಮುನೀರಪ್ಪ ಎಂಬುವವರನ್ನು ದೊಣ್ಣೆಗಳಿಂದ ಅಮಾನುಷವಾಗಿ ಹೊಡೆದು ಗಾಯಗೊಳಿಸಿದ್ದಾರೆ. ಗಾಯಾಳುಗಳು ಈಗ ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದಿದ್ದಾರೆ.

ತಮ್ಮ ಪಕ್ಷದ ಅಭ್ಯರ್ಥಿಗೆ ಓಟು ಹಾಕಲಿಲ್ಲವೆಂಬ ಬೇಗುದಿಯಿಂದ ಮತ್ತೆ ಮರುದಿನ ಮೇ 3ರಂದು ಹಾಡುಹಗಲು ಸುಮಾರು 11ಗಂಟೆ ಸಮಯದಲ್ಲಿ ಆ ನಾಲ್ವರು ಪುರಸಭಾ ಸದಸ್ಯರ ನೇತೃತ್ವದಲ್ಲಿ ಮೂರನೇ ಸುತ್ತಿನ ದೌರ್ಜನ್ಯ ನಡೆಸಿದರು. ತಮ ಕೈಗೆ ಸಿಕ್ಕಿದ ನತದೃಷ್ಟೆ ಕದೀರಮ್ಮ ಎಂಬಾಕೆಯನ್ನು ಎಳೆದಾಕಿ ಅಮಾನವೀಯವಾಗಿ ಥಳಿಸಿದ್ದಾರೆ. ಅಷ್ಟೇ ಅಲ್ಲದೆ "ನಿಮ್ಮ ಗುಡ್ಸಲು ನಿಮನ್ನೆಲ್ಲ ಸುಟ್ಬಿಡ್ತಿವಿ" "ಈ ಮಾದ್ಗ ಜಾತೀನ ಬೂಟ್ನಲ್ಲಿ ಒದ್ದು ಊರ್ನಾಚೆ ಇಡ್ಬೇಕು" ಎಂದು ಹೆಂಗಸರು ಮಕ್ಕಳೆನ್ನದೆ ಅವಾಚ್ಯವಾಗಿ ಬೈದಿದ್ದಾರೆ.

ಈ ಸಂಬಂಧದಲ್ಲಿ ಸ್ಥಳೀಯ ಪೊಲೀಸ್‌ಗೆ ದೂರು ನೀಡಿದ್ದರು. ಈವರೆಗೆ ಯಾವುದೇ ರೀತಿಯ ಸೂಕ್ತಕ್ರಮ ತೆಗೆದುಕೊಂಡಿಲ್ಲ. ಪುರಸಭಾ ಸದಸ್ಯರ ಈ ಕ್ರೂರ ಕೃತ್ಯವನ್ನು ರಾಜ್ಯ ದಲಿತ ಸಂಘರ್ಷ ಸಮಿತಿ ಖಂಡಿಸಿ, ಇವರನ್ನು ಬಂಧಿಸಿ ತಕ್ಕ ಶಿಕ್ಷೆ ವಿಧಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಿದೆ.

# ಹರಿಜನ ರಿಕ್ಷಾವಾಲನ ಜೀವಸಹಿತ ದಹನ

ಆಗ್ರಾದಲ್ಲಿ ರಿಕ್ಷಾ ಓಡಿಸುತ್ತಿದ್ದ ಹರಿಜನ ಶಂಕರ್ ಎಂಬಾತನನ್ನು ಸಾದರ್ ಬಜಾರ್ ಪೋಲೀಸ್‌ಠಾಣೆ ಸರಹದ್ದಿನಲ್ಲಿ ಮೇ 24ರಂದು ಜೀವಸಹಿತ ಸುಡಲಾಯಿತು. ಇದನ್ನು ಪ್ರತಿಭಟಿಸಿದ ಹರಿಜನರ ಮೇಲೆ 27ರಂದು ಪೊಲೀಸರು ಅಶ್ರುವಾಯು ಷೆಲ್‌ಗಳನ್ನು ಸಿಡಿಸಿದರು.

# ಮಾಲೂರಿನಲ್ಲಿ ಕಗ್ಗೊಲೆ

[ಒಂದನೇ ಪುಟದಿಂದ]

ಮೇ 17 ರಂದು ಮಧ್ಯಾಹ್ನ 3-30 ಗಂಟೆ, ಸಮಯದಲ್ಲಿ ಎರಡೂಗ್ರಾಮಗಳ ಸವರ್ಣೀಯ ಭೂಮಾಲೀಕರು ತಮ್ಮ ಕಡೆಯ ಗೂಂಡಾಗಳೊಂದಿಗೆ ಬೆಳಗೆರೆಯನ್ನು ಸುತ್ತುವರೆದರು. ಸುದ್ದಿ ತಿಳಿದ ನನ್ನ ಸೋದರ ಸಂಬಂಧಿ ವೆಂಕಟಸ್ವಾಮಿ ಈ ಬಗ್ಗೆ ಪೊಲೀಸರಿಗೆ ದೂರು ಕೊಡಲು ಯತ್ನಿಸಿ ವಿಫಲನಾದ.

ಭಯಗೊಂಡ ನಾವು ರಕ್ಷಣೆಗೆಂದು ಚಿಲಕಹಾಕಿ ಮನೆಯೊಳಗೆ ಸೇರಿಕೊಂಡೆವು. ಆದರೂ ಕೊಲೆಗಡುಕರ ಕೈಯಿಂದ ನನ್ನ ಪತಿ ತಪ್ಪಿಸಿಕೊಳ್ಳಲಾಗಿಲ್ಲ. ಸಂಜೆ ಸುಮಾರು ಆರೂವರೆ ಗಂಟೆಯಲ್ಲಿ ಕೋಡಿಹಳ್ಳಿಯ ಕೃಷ್ಣಪ್ಪ, ಮುನಿಸ್ವಾಮಿ, ಬಸವರಾಜು, ಪರಮೇಶ, ಸುಬ್ರಿ, ಸೊಣ್ಣಪ್ಪ, ಕೊಕ್ಕ, ಮುನಿಯೆಲ್ಲಪ್ಪ, ಕಬ್ಬಾಳಪ್ಪ, ನಾಗಾವಾರದ ರಾಮ, ಎಲ್ಲಪ್ಪ, ಚೆಲುವನ ಮಗ ಪರಮೇಶ, ಸೊಣ್ಣಪ್ಪ, ಮುನಿಕೆಂಪಣ್ಣ, ಮುನಿವೆಂಕಟಪ್ಪ, ಮರಿಕಳದ ರಾಮ, ನಂಜಪ್ಪ, ಮುನಿವೆಂಕಟಪ್ಪ, ಮುನಿಶಾಮಣ್ಣ ನಾರಾಯಣಪ್ಪ ಮತ್ತು ಚಿಕ್ಕೋನು–ಅವರುಗಳು ಮನೆಯನ್ನು ಸುತ್ತುಗಟ್ಟಿದರು.

ಬಾಗಿಲು ಮುಚ್ಚಿದ್ದರಿಂದ ಮಚ್ಚು, ಕೊಡಲಿ, ಕಲ್ಲು ಮತ್ತು ಗಡಾರಿಗಳಿಂದ ಬಾಗಿಲನ್ನು ಒಡೆದು ಒಳನುಗ್ಗಿದರು, ಕೆಲವರು ಮೇಲಿಂದ ಒಳಗಿಳಿದರು. ನಂತರ ಕೃಷ್ಣಪ್ಪ, ಮುನಿಸ್ವಾಮಿ ಮುನಿವೆಂಕಟಪ್ಪ, ಮರಿ ಕಳದ ರಾಮಪ್ಪ, ನಂಜಪ್ಪ, ಬಸವರಾಜ, ಪರಮೇಸ ಅವರು ತಮ್ಮ ಕೈಯಲ್ಲಿದ್ದ ಆಯುಧಗಳಿಂದ ನನ್ನ ಪತಿ ಎಲ್ಲಪ್ಪನ ಮೇಲೆ ಬಿದ್ದರು. ಎಷ್ಟೇ ಆರ್ಭಟಿಸಿ, ಬೇಡಿಕೊಂಡರೂ ನಮ್ಮ ಕಣ್ಣೆದುರೆ ಆತನ ಅಂಗಾಂಗಗಳನ್ನು ಕತ್ತರಿಸಿ ತುಂಡು ತುಂಡು ಮಾಡಿ ಎತ್ತಿಕೊಂಡು ಹೋದರು ಎಂದು ಮನವಿಯಲ್ಲಿ ತಿಳಿಸಲಾಗಿದೆ.

ಈ ಕೊಲೆ ಸಂಬಂಧದಲ್ಲಿ ಪೊಲೀಸರು ಕೆಲವರನ್ನು ಬಂಧಿಸಿದ್ದರೂ, ಎಲ್ಲಾ ಆರೋಪಿಗಳನ್ನು ಬಂಧಿಸಿ ಶಿಕ್ಷಿಸಿಲ್ಲ. ಕೊಲೆಗೀಡಾದ ಎಲ್ಲಪ್ಪನ ಶವವೂ ಈವರೆಗೆ ಪತ್ತೆಯಾಗಿಲ್ಲ. ಹಳಗೆರೆಯ ಸುತ್ತಲಿನ ದಲಿತರೆಲ್ಲ ಹಾಡುಹಗಲಿನಲ್ಲಿ ನಡೆದ ಈ ಅಮಾನುಷ ಕೊಲೆಯಿಂದ ಭೀತಿಗೊಂಡು ಪ್ರಾಣವನ್ನು ಕೈಲಿ ಹಿಡಿದುಕೊಂಡು ಬದುಕುತ್ತಿದ್ದಾರೆ.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3. ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ : 5ಎ. ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560002